


ಮಕರಂದ ಸಾಹಿತ್ಯ ಮಾಲೆಯ ಎರಡನೆಯ ಪುಷ್ಪ

# ಲೋಕದ ಕಣ್ಣು



( ಕಥಾ ಸಂಕಲನ )



ಮಹದೇವ ಬಣಕಾರ



ಮಕರಂದ ಸಾಹಿತ್ಯ ಮಾಲಾ
ದಾಜೀಬಾನ ಪೇಟ, ಹುಬ್ಬಳ್ಳಿ.

೧೯೫೪ ] [೦-೧೨-೦

— ಹಿತಚಿಂತಕರು —

ಶ್ರೀಮಾನ್ ವ್ಹಿ. ಬಿ. ಪಾಟೀಲರು.

— ಸಂಪಾದಕರು —

ಶ್ರೀ ಕೆ. ಅನ್ನದಾನೀಶ್ವರ, ಸಂಶಿ.

ಸಲಹೆಗಾರ ಸಮಿತಿ

ಶ್ರೀ ಎಂ. ಎಸ್. ಕಟ್ಟಿ B. Sc. [ Agri ]
,, ಆಯ್. ಎ. ಹಿರೇಮಠ, ಪುಣೆ.
,, ಬಸವರಾಜ ಅಂಗಡಿ. ಬಂಕಾಪುರ.
,, ದೇಸಾಯಿ ದತ್ತಮೂರ್ತಿ— ಹುಬ್ಬಳ್ಳಿ.
,, ಎಸ್. ಎಸ್. ಸಜ್ಜನ. ,,
,, ಮಹದೇವ ಬಣಕಾರ, ಧಾರವಾಡ.



ಮೊದಲ ಮುದ್ರಣ ೧೯೫೪.

ಬೆಲೆ— ಹನ್ನೆರಡು ಆಣೆ



— ಮಾರಾಟಗಾರರು

ಶಿವಪೂರ ಬ್ರದರ್ಸ. ಧಾರವಾಡ
ಸಮಾಜ ಪುಸ್ತಕಾಲಯ ,,
ಸಾಹಿತ್ಯ ಭಾಂಡಾರ ಹುಬ್ಬಳ್ಳಿ.
ಇಂಟರನ್ಯಾಶನಲ್ ಸ್ಟೋರ್ಸ ,,
ವೀಣಾ ಬುಕ್ ಡಿಪೋ, ಬೆಳಗಾಂವ.

— ಮುದ್ರಕರು

ಶ್ರೀ ಎಂ. ಡಿ. ಜಕಾತೆ, ಸ್ವಸ್ತಿಕ ಪ್ರಿಂಟಿಂಗ್ ಪ್ರೆಸ್ ಹುಬ್ಬಳ್ಳಿ.

# ನಿ ವೇ ದ ನೆ

೧೯೫೩ ಅಗಸ್ಟ ೧೫ ರಂದು ಪ್ರಕಟವಾದ ನನ್ನ ಎರಡನೆಯ ಕೃತಿ “ ಬಣ್ಣದ ಕಾರಂಜಿ ” ಯು ರಸಿಕ ವೃಂದವನ್ನು ತಣಿಸಿದೆ. ಆ ಬಗೆಗೆ ಗೆಳೆಯರನೇಕರು ಓಲೆ ಬರೆದಿದ್ದಾರೆ. ಮಾನ್ಯ ವಿಮರ್ಶಕರು ಅತ್ಯುತ್ತಮ ಅಭಿಪ್ರಾಯ ಪಟ್ಟಿದ್ದಾರೆ.

ಮೂರನೆಯದಾಗಿ ಪ್ರಕಟವಾಗುತ್ತಿರುವ “ ಲೋಕದ ಕಣ್ಣು ” ಏಳು ಕತೆಗಳ ಸಂಕಲನವಾಗಿದೆ. ಸುಮಾರು ನಾಲ್ಕಾರು ವರ್ಷಗಳ ಅವಧಿಯಲ್ಲಿ ಆಗೀಗ ಬರೆದ ಈ ಕತೆಗಳನ್ನು ಒಂದು ಸಂಕಲನ ರೂಪದಲ್ಲಿ ಓದುಗರಿಗೆ ಒಪ್ಪಿಸುವ ಸಾಹಸವು, ಗೆಳೆಯರಾದ ಶ್ರೀ ಅನ್ನದಾನೀಶ್ವರರದು.

“ ಲೋಕದ ಕಣ್ಣು ” ಈಗಾಗಲೇ ಅಚ್ಚಾಗುವದೆಂದು ನಾನು ಬಗೆದಿರಲಿಲ್ಲ; ಆ ಹವ್ಯಾಸಕ್ಕೂ ಹೋಗಿರಲಿಲ್ಲ.

ಆದರೆ ಹುಬ್ಬಳ್ಳಿಯ ಮಕರಂದ ಸಾಹಿತ್ಯ ಮಾಲೆಯ ಸಂಪಾದಕರಿಂದ ಓಲೆ ಬಂದಾಗ ನನಗೆ ಆಶ್ಚರ್ಯವಾಯಿತು. ಯಾಕಂದರೆ ನಾನು ಈವರೆಗಾದರೂ ‘ ಕತೆಗಾರ ’ ಎನಿಸಿಕೊಂಡಿಲ್ಲ.

ಅಂತೂ ಕೊನೆಗೆ ಮಕರಂದ ಸಾಹಿತ್ಯ ಮಾಲೆಯ ಎರಡನೆಯ ಪ್ರಕಟನೆಗಾಗಿ “ ಲೋಕದ ಕಣ್ಣು ” ಕೊಡುವುದಾಗಿ ಒಪ್ಪಿಕೊಂಡೆ.

“ ನೀವು ಹೇಳುವುದೇನೋ ನಿಜ. ನನ್ನ ಕತೆಗಳು ಹೇಗಿವೆಯೋ ಯಾರಿಗೆ ಗೊತ್ತು? ಒಬ್ಬ ನುರಿತ ಕತೆಗಾರರಿಗೆ ಇವುಗಳನ್ನು ತೋರಿಸಿ, “ ಮುನ್ನುಡಿ ” ಬರೆಯಿಸಿ ಕೊಡುತ್ತೇನೆ ” ಎಂದು ಹೇಳಿದೆ.

ಆದರೆ ಮಾಲೆಯ ದ್ವಿತೀಯ ಪುಷ್ಪವು ಶೀಘ್ರದಲ್ಲಿಯೇ ಪ್ರಕಟವಾಗಬೇಕಾದ ಸಂದಿಗ್ದ ಸಮಯ ಸನ್ನಿಹಿತವಾದುದರಿಂದ ಮುನ್ನುಡಿಯ ವಿಚಾರವನ್ನು ಬಿಟ್ಟುಬಿಟ್ಟೆ. ಆ ಭಾರವನ್ನು ಮಾನ್ಯ ವಿಮರ್ಶಕರಿಗೆ ಒಪ್ಪಿಸಿದ್ದೇನೆ.

ಮಾನ್ಯ ವಿಮರ್ಶಕರು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸಿ, ಸರಿಯಾದ ಮಾರ್ಗ ನಿರ್ಮಾಣ ಮಾಡಲಿ, ತಪ್ಪಿದ್ದರೆ "ತಪ್ಪು" ಎಂದು ಹೇಳಲಿ ನೈಜತೆಯನ್ನು ಎತ್ತಿತೋರಿಸಿ, ದಾರಿದೀಪವಾಗಬಲ್ಲ "ವಿಮರ್ಶೆ" ಯನ್ನು ದಯಪಾಲಿಸಲಿ. ಯಾಕಂದರೆ ಕತೆಗಾರ ಲೋಕದಲ್ಲಿ ಇದೀಗ ಕಾಲಿಡುತ್ತಿರುವಾಗಲೇ ತಪ್ಪು ಹೆಜ್ಜೆಯನ್ನಿಟ್ಟರೆ ಹೇಗೆ? ಮಾನ್ಯ ವಿಮರ್ಶಕರು ನನ್ನ ಕತೆಗಳ ಗುಣದೋಷಗಳನ್ನು ಎತ್ತಿ ತೋರಿಸಿ ಸರಿಯಾದ ಮಾರ್ಗ ನಿರ್ಮಾಣ ಮಾಡಲೆಂದು ಪುನಃ ನಿವೇದಿಸಿಕೊಳ್ಳುತ್ತೇನೆ. ಅವರಿಗೆ ನನ್ನ ಸಾದರದ ಸ್ವಾಗತವಿದೆ!

ಇನ್ನು ಈ ಮಾಲೆಯ ಸಂಪಾದಕರಾದ ಶ್ರೀ ಅನ್ನದಾನೀಶ್ವರರು ಸ್ವಭಾವತಃ ಕವಿಗಳು. ದೇಶಾಭಿಮಾನ ಅವರಲ್ಲಿ ತುಂಬಿ ತುಳುಕುತ್ತಿದೆ. ಆ ದ್ಯೋತಕವಾಗಿಯೇ 'ಸ್ವಾತಂತ್ರ್ಯಗಾಳಿ' ಎಂಬ ಕವನಗಳ ಸಂಕಲನವು ೧೫ನೇ ಆಗಸ್ಟರಂದು ಪ್ರಕಾಶನಗೊಂಡಿದೆ.

ಕೊನೆಯದಾಗಿ ಶ್ರೀ. ಕೆ. ಅನ್ನದಾನೀಶ್ವರರು ಗ್ರಂಥಮಾಲೆಯಂಥ ಅತ್ಯಂತ ಭಾರವಾದ ಹಾರವನ್ನು ಹಾಕಿಕೊಂಡು, ತಮ್ಮ ಕೊರಳನ್ನು ಸುರಕ್ಷಿತವಾಗಿಟ್ಟುಕೊಳ್ಳುವದು ಕಷ್ಟಸಾಧ್ಯವಾದ ವಿಷಯವಾಗಿದೆ. ಯಾಕಂದರೆ ಅದೆಷ್ಟೋ ಗ್ರಂಥಮಾಲೆಗಳ ಸಂಪಾದಕರ ಕೊರಳುಗಳು ಮುರಿದು ಹೋಗಿವೆ, ಬೆನ್ನುಗಳು ಬಾಗಿವೆ, ಹೀಗಾಗಿ ಇಂದಿಗೂ ನರಳುತ್ತಿದ್ದಾರೆ.

ಸಾಹಿತ್ಯ ಸೇವೆಯಿಂದ ಹೊಟ್ಟೆತುಂಬದಾಗಿ, ಅರೆಗೂಳು ತಿಂದು ಬದುಕುವ ಸಾಹಿತಿಗಳ ಕೃತಿಗಳನ್ನು ಪ್ರಕಾಶನಗೊಳಿಸಿ, ವಾಚನಾಭಿರುಚಿ ಇಲ್ಲದ ಹಾಗೂ ಕೊಂಡುಓದುವ ರೂಢಿಯನ್ನಿಟ್ಟುಕೊಳ್ಳದ ನಮ್ಮ

ವಾಚಕ ಬಂಧುಗಳಿಂದ ಹತ್ತಾರು ರೂಪಾಯಿಗಳನ್ನು ದೊರಕಿಸಿಕೊಂಡು ಗ್ರಂಥಮಾಲೆಗಳ ಸಂಪಾದಕರು ಮಾಡುವುದಾದರೂ ಏನು ?

ಆದರೇನು ಕೊಂಡು ಓದುವ ರೂಢಿಯನ್ನು ಇಟ್ಟುಕೊಂಡು, ವಾಚಕರು ಸಹಾಯ, ಸಹಕಾರಗಳನ್ನು ನೀಡುವುದಾದರೆ, ಹಾಗೂ ಲೇಖಕರಿಂದ ಉತ್ತಮ ಸಾಹಿತ್ಯ ನಿರ್ಮಾಣವಾಗುವುದಾದರೆ ಗ್ರಂಥಮಾಲೆಗಳು ನಾಲ್ಕೊಪ್ಪತ್ತು ಬಾಡದಿರಬಹುದು. ಇಲ್ಲವಾದರೆ ಅದೊಂದು ಹಾಸ್ಯಾಸ್ಪದವಾದ ಮಾತೇ ಸರಿ !

ಇನ್ನು ತಮ್ಮ ಮಕರಂದ ಸಾಹಿತ್ಯಮಾಲೆಯ ಎರಡನೆಯ ಪ್ರಕಟನೆಯಾಗಿ 'ಲೋಕದ ಕಣ್ಣು' ಪ್ರಕಾಶನ ಗೊಳಿಸಿದ ಶ್ರೀಮಾನ್ ಕೆ. ಅನ್ನದಾನೀಶ್ವರರಿಗೆ ನನ್ನ ವಂದನೆಗಳು. ಹಾಗೂ ಈ ಸಂಗ್ರಹವು ಅಚ್ಚಾಗುವ ಮೊದಲೇ ಕೆಲ ಕೆಲವು ಕತೆಗಳನ್ನು ಪ್ರಕಟಿಸಿ, ಬೆಳಕು ತಂದು ಕೊಟ್ಟ 'ನವಯುಗ' 'ಪ್ರಜಾಮತ' 'ವಿಕಾಸ' 'ನವಶಕ್ತಿ', ಈ ಪತ್ರಿಕೆಗಳ ಸಂಪಾದಕರಿಗೆ ನನ್ನ ವಂದನೆಗಳು.

ಕಾವ್ಯ ಕುಟೀರ
ಸಪ್ತಾಪುರ,
**ಧಾರವಾಡ**
೮–೨–೫೪

ಮಹಾದೇವ ಬಣಕಾರ

# ಅರಿಕೆ

ಸಹೃದಯರೇ—

ನಮ್ಮ ಮಕರಂದ ಸಾಹಿತ್ಯ ಮಾಲೆಯ ಸೇವಾರಂಭವಾಗಿ ಕೇವಲ ಅತ್ಯಲ್ಪಕಾಲವಾಗಿದ್ದರೂ ಈ ಮಾಲೆಯ ಪ್ರಥಮ ಪುಷ್ಪವಾಗಿ "ಬೆಳಕಿ ನೆಡೆಗೆ" ಎಂಬ ಕಥಾ ಸಂಕಲನವನ್ನು ನೀಡಿದ್ದೇವೆ. ತದನಂತರ ಶ್ರೀ ಮಹದೇವ ಬಣಕಾರರ 'ಲೋಕದ ಕಣ್ಣು' ಕಥಾ ಸಂಕಲನವನ್ನು ನಿಮಗೆ ಅರ್ಪಿಸುತ್ತಲಿದ್ದೇವೆ. ಕೇವಲ ಸಾಹಿತ್ಯ ವ್ಯವಸಾಯದಿಂದ ಬದುಕುವದು ಕಷ್ಟ ಸಾಧ್ಯ ವಿಷಯವಾಗಿದ್ದರೂ ಸಾಹಿತ್ಯ ಶಾರದೆಗೆ ಸೇವೆ ಸಲ್ಲಿಸಬೇಕೆಂಬ ಮನೋಭಿಲಾಷೆಯಿಂದ ಈ ಕಾರ್ಯವನ್ನು ಕೈಕೊಳ್ಳಲಾಗಿದೆ. ಸಮಾಜದ ಹಾಗೂ ನಮ್ಮ ಜೀವನದಲ್ಲಿ ನಿತ್ಯವೂ ನೂತನವಾಗಿ ನಡೆಯುತ್ತಿರುವ ಘಟನೆಗಳನ್ನು ಪ್ರಥಃಕರಿಸಿ ಗುಣ ದೋಷಗಳನ್ನು ಎತ್ತಿ ತೋರಿಸಿ ಸರಿಯಾದ ಮಾರ್ಗ ಕಲ್ಪಿಸಿಕೊಡುವದು ಸಾಹಿತ್ಯದ ಉದ್ದೇಶವಾಗಿರುವದರಿಂದ ನಾನು ಇನ್ನಿತರ ಗೆಳೆಯರ ಸಹಕಾರದೊಂದಿಗೆ ಕಾರ್ಯಾಭಿಮುಖನಾಗಿದ್ದೇನೆ. ನನ್ನ ಆಶೆ ಈಡೇರುವಂತೆ ಸಾಹಿತಿಗಳೂ, ವಾಚಕ ಬಂಧುಗಳೂ ಸಹಕಾರವನ್ನು ನೀಡಲಿ.

ಕೊನೆಯದಾಗಿ ತಮ್ಮ ಕಥಾ ಸಂಕಲನವನ್ನು ಗೆಳೆಯ ಶ್ರೀ ಮಹದೇವ ಬಣಕಾರರು ನಮ್ಮ ಮಾಲೆಯಲ್ಲಿ ಪ್ರಕಟಿಸಲಿತ್ತುದಕ್ಕಾಗಿ ನಾವು ಅವರಿಗೆ ಋಣಿಯಾಗಿದ್ದೇವೆ.

ನಮ್ಮ ಮಾಲೆಯ ಮೂರನೆಯ ಪ್ರಕಟನೆಗಾಗಿ ಒಂದು ಕಾದಂಬರಿಯನ್ನು ಅರ್ಪಿಸಬೇಕೆಂದಿಟ್ಟು ಕೊಂಡಿದ್ದೇವೆ.

ಈ ಪುಸ್ತಕವನ್ನು ಅಲ್ಪ ವೇಳೆಯಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಸ್ವಸ್ತಿಕ ಪ್ರಿಂಟಿಂಗ ಪ್ರೆಸ್ ಒಡೆಯರಿಗೂ ಹಾಗೂ ಕೊಡುಗೈಯಿಂದ ಉದಾರಾಶ್ರಯವನ್ನಿತ್ತು ಸಹಾಯ ನೀಡಿದ ಆಶ್ರಯದಾತರಿಗೂ ನಮ್ಮ ಕೃತಜ್ಞತೆಗಳು.

ಮಕರಂದ ಸಾಹಿತ್ಯಮಾಲಾ
ದಾಜೀಬಾನ ಪೇಟ, **ಹುಬ್ಬಳ್ಳಿ**
೮—೨—೫೪

— ಸಂಪಾದಕ —

ಕೆ. **ಅನ್ನದಾನೀಶ್ವರ ಸಂಶಿ.**

## ನಮ್ಮ ಪ್ರಕಟನೆಗಳು.

೧) **ಬೆಳಕಿನೆಡೆಗೆ** ( ಕಥಾ ಸಂಕಲನ ) ವಿವಿಧ ಲೇಖಕರಿಂದ.

೨) **ಲೋಕದ ಕಣ್ಣು** ( ಕಥಾ ಸಂಕಲನ) ಲೇ. ಶ್ರೀ ಮಹದೇವ ಬಣಕಾರ.

ಮೂರನೆಯ ಪ್ರಕಟನೆಗಾಗಿ, ರಸಭರಿತ ಕಾದಂಬರಿಯೊಂದನ್ನು ಒದಗಿಸಲಿದ್ದೇವೆ.

**ವರ್ಷದಲ್ಲಿ ನಾಲ್ಕು ಹೊತ್ತಿಗೆಗಳು !**

ವಾರ್ಷಿಕ ವಂತಿಕೆ [illegible] ರೂಪಾಯಿ ( ಅಂಚೇ ವೆಚ್ಚಸೇರಿ )

— ಸಂಪಾದಕರು —

**ಶ್ರೀ. ಕೆ. ಅನ್ನದಾನೀಶ್ವರ, ಸಂಶಿ.**

ಮಕರಂದ ಸಾಹಿತ್ಯ ಮಾಲಾ, ದಾಜೀಬಾನ ಪೇಟೆ, **ಹುಬ್ಬಳ್ಳಿ.**

---

## ಅಚ್ಚಿನಲ್ಲಿದೆ.

ಆದರ್ಶತ್ವದ ದಾರಿಯಲ್ಲಿ ಮುನ್ನುಗ್ಗುತ್ತಿರುವಾಗ, ಆ ಆದರ್ಶತ್ವಕ್ಕೆ ಧಕ್ಕೆ ತಗಲುವಂಥ ಪ್ರಸಂಗವೇನಾದರೂ ಬಂದರೆ, ಕಿಂಚಿತ್ ಕಾಲವಾದರೂ ಆದರ್ಶತ್ವವನ್ನು ಬದಿಗಿರಿಸಿ, ನಿಮ್ಮ ಕಾರ್ಯವನ್ನು ಸಾಧಿಸಿಕೊಳ್ಳಿರಿ. ಇದು '**ತಿಂದೋಡಿ**'ಯ ಉಪದೇಶ !

ಹೇಗಿದೆ ?

**—ಪ್ರತಿಗಳಿಗಾಗಿ ನಿರೀಕ್ಷಿಸಿರಿ—**

# ತಿಂದೋಡಿ ?

**( ಮೂರಂಕಿನ ನಾಟಕ )**

ಲೇಖಕರು:— **ಶ್ರೀ ಮಹದೇವ ಬಣಕಾರ.**

ಪ್ರಕಾಶಕರು:— **ವೀಣಾ ಬುಕ್ ಡಿಪೋ** ಮಾರುತೀ ಬೀದಿ, ಬೆಳಗಾವಿ.

## ಮುಡಿಪು

ಲೋಕದ ಕಣ್ಣಿನಲ್ಲಿ ಪ್ರಖರವಾಗಿ
ಪ್ರಜ್ವಲಿಸುತ್ತಿರುವ ಕಾಮಾಗ್ನಿಯಲ್ಲಿ
ದಹಿಸಿಹೋಗುತ್ತಿರುವ

ತಾಯಂದಿರಿಗೆ—

—ಲೇಖಕ

# ಪರಿವಿಡಿ

# ಲೋಕದ ಕಣ್ಣು

Let me live truly, my lord, So that
death to me become true.

*Rabindranath Tagore.*

" ಅದೇಕವ್ವಾ ನಿಟ್ಟುಸಿರು ? "

" ನಿಟ್ಟುಸಿರಲ್ಲ. ಇದು ನನ್ನ ಬಾಳಿನ ಉಸಿರು ! "

" ಬಾಳಿನ ಉಸಿರು ! ಅಯ್ಯೋ ! ಈ ಜನ್ಮದಲ್ಲಿ ನೀನು ಬಹಳ ಕಷ್ಟ ಕಂಡಿರಬೇಕು ? "

" ಕಂಡಿರಬೇಕು ಎಂದು ಸಂಶಯ ತಾಳಬೇಡಿರಿ. ನಾನು ಕಂಡುದುದೆಲ್ಲ ಕಷ್ಟವೇ !

" ಹೀಗೇಕಾಯಿತವ್ವಾ ? "

" ಇದು ನಿಸರ್ಗದ ನಿಯಮ, ಬೇಡಿ ಬಯಸಿದುದೆಲ್ಲ ಬಟ್ಟ ಬಯಲಾಗುವದು ಈ ಜಗದ ನಿಯಮ ! ನೀವಿನ್ನೂ ಆ ಲೋಕದಲ್ಲಿ ಕಾಲಿಟ್ಟಿರಲಿಕ್ಕಿಲ್ಲ... "

“ ಹಾಗೇನಿಲ್ಲ ಸಾಕಷ್ಟು ಸಹಿಷ್ಣುತೆ ತಾಳಿದ್ದೇನೆ. ”

“ಸಹಿಷ್ಣುತೆ ! ಅದು ಎಲ್ಲಿರುತ್ತದೆ ? ಹೇಗಿರುತ್ತದೆ. ? ....”

“ ಅದೇಕಮ್ಮ ನಿಮ್ಮ ಕಣ್ಣುಗಳಲ್ಲಿ ನೀರು...?”

“ ಕಣ್ಣಿನಲ್ಲಿ ಕಾಣುವ ಈ ನೀರು ಕಣ್ಣೀರೆಂದು ಮೂದಲಿಸಬೇಡಿರಿ. ನನ್ನ ಜೀವನಪರ್ಯಂತವಾಗಿ ಸಂದ ಸಂಕಷ್ಟಗಳನ್ನೆಲ್ಲ ಮರೆಮಾಚಿ ಸಾವು–ನೋವುಗಳ ಸಮ್ಮಿಳನದಿಂದ ಉದ್ಭವಿಸಿದ ಈ ನಿರಾಶ್ರಿತೆಯು ಇನ್ನೂ ಜೀವಂತವಿರುವುದಕ್ಕೆ ಈ ಕಣ್ಣೀರುಗಳೇ ಅನುವು ಮಾಡಿಕೊಟ್ಟವೆ. ಲೋಕದ ಕಣ್ಣು ಕಾಣುವ ಕೂರ್ಮೆಯ ಕುಡಿ ಈ ನನ್ನ ಕಣ್ಣೀರಿನೊಳಗಿಲ್ಲ. ನನ್ನ ಜೀವನದ ಹೋರಾಟಕ್ಕೆ ಇಲ್ಲಿಯವರೆಗೂ ಸಹಾನುಭೂತಿ ತೋರಿಸಿ, ಮಲ್ಮಲ ಮರುಗಿ, ಕರಗಿ ಹರಿಯುತ್ತಿರುವ ಈ ಕಣ್ಣೀರು...... ಇಲ್ಲದೇ ಹೋಗಿದ್ದರೆ....?

“ ಮುಂದೆ...? ”

“ ಮುಂದೆ.... ? ಎಂದು ಪ್ರಶ್ನೆ ಮಾಡುವ ಭಾರವೇ ನಿಮಗೆ ಬೀಳುತ್ತಿರಲಿಲ್ಲ... ”

“ ಇರಲಮ್ಮಾ ನಿನ್ನ ಹೆಸರೇನು ? ”

“ ಏನು ? ನನ್ನ ಹೆಸರಿನಿಂದೇನಾಗಬೇಕಾಗಿದೆ ? ”

“ ಏನೂ ಇಲ್ಲ. ನಿಮ್ಮನ್ನು ನೋಡಲಾಗದೆ ಕೇವಲ ಸೋದರಿಯ ಭಾವದಿಂದ ಕೇಳಿದೆ...”

“ ಸೋದರಿ ! ಸೋದರಿಯ ಭಾವನೆ !! ಇಲ್ಲ ಸತ್ಯವಾಗಿಯೂ ಇಲ್ಲ. ‘ ಸೋದರಿ ’ ಎಂದವರೇ ಶೂಲವಾಗಿ ಪರಿಣಮಿಸಿದ್ದಾರೆ. ”

“ ಅದೇಕಮ್ಮಾ ಈ ಭಾವನೆ ? ನಾನು ನಿಜವಾಗಿಯೂ ನೀನು ನನ್ನ ವಳೆಂಬ ಪವಿತ್ರ ಭಾವನೆಯಿಂದ ಕೇಳಿದೆ. ಅನ್ಯಥಾ ತಿಳಿದುಕೊಳ್ಳಬೇಡಿರಿ ! ”

" ಇಲ್ಲ. ತಿಳಿಯುವದೇನೂ ಉಳಿದಿಲ್ಲ. ಎಲ್ಲವೂ ತಿಳಿಯಾಗಿದೆ. ದಯಮಾಡಿ ನೀವು ಹೇಗಾದರೂ ಸಹಿಸಿಕೊಳ್ಳುವೆನೆಂದರೆ... ನಾಲ್ಕು ಕೊನೆಯ ಮಾತುಗಳನ್ನು ಹೇಳುತ್ತೇನೆ. "

" ಅಗತ್ಯವಾಗಿ ! .ನೀವು ನನ್ನ ತಾಯಿಯ ಸಮಾನ "

" ಅದೇನಿಲ್ಲ. ನಾನೋರ್ವಳೇ ಏಕೆ? ಪುರುಷರೆಲ್ಲ; ತಂದೆಯ ಸಮಾನ ಸ್ತ್ರೀಯರೆಲ್ಲ ತಾಯಂದಿರ ಸಮಾನ. ಅದಿರಲಿ **ನನಗೆ ಮಾತ್ರ " ಸೋದರಿ " ಯವರು ಶೂಲವಾಗಿದ್ದಾರೆ, ' ಅಮ್ಮಾ' ಎಂದವರು ಆತ್ಮವಂಚಕರಾಗಿ ದ್ದಾರೆ. ' ತಾಯಿಯ ಸಮಾನ ' ಎಂದವರು ತಾಳಲಾರದ ತಾಪ ಕೊಟ್ಟು, ಕಡುಪಾಪ ಕೃತ್ಯಕ್ಕೆ ಕೈ ಹಾಕಿದ್ದಾರೆ.** ಆದರೆ, ನನಗೆ ನನ್ನವರೆನ್ನುವವರೆಲ್ಲ ಹೀಗೆಯೇ ! "

" ಇಲ್ಲವೆನ್ನಲಾರೆ ತಾಯೀ ! ನೀವು ನನ್ನನ್ನು ನಂಬುವುದಾದರೆ, ನಾನೂ ನಾಲ್ಕು ಮಾತು ಹೇಳುವೆ....? "

' ನಂಬುಗೆ ! ನೀವು ಯಾರೋ ನನಗೆ ಗೊತ್ತಿಲ್ಲ. ದಯಮಾಡಿ ಕ್ಷಮಿಸಿರಿ ! ನನಗೆ ನಂಬುಗೆಯವರು ಈ ಲೋಕದಲ್ಲಿಯೇ ಇಲ್ಲ. ಯಾರೋ ಒಬ್ಬ ಕವಿಗಳು ಹೇಳಿದ ಮಾತು ನನ್ನ ನೆನಪಿನಲ್ಲಿದೆ. ಹೇಳಲೇ ? '

' ಅಗತ್ಯವಾಗಿ ! '

' ಎಚ್ಚರಿರೊ ಲೋಕದಲ್ಲಿ. ಮತ್ಸರತೆ ತುಂಬಿಹುದು. ವಿಧಿಯ ಕೈಕತ್ತಿ ಬಹು ಹರಿತವಾಗಿಹುದು ! ನಿನ್ನ ಬಾಯೊಳು ದೈವ, ಅಮೃತನು ಇಟ್ಟೊಡೆ-

ನುಂಗದಿರು ಅದರೊಳಗೆ ನಂಜು ಇದ್ದೀತು ನೋಡು ! '

' ಸತ್ಯ ತಾಯೀ ಸತ್ಯ...'

'...........'

'...........'

೪

'ಏಕೆ ಸುಮ್ಮನಾದಿರಲ್ಲಾ....? '

' ಏಕೂ ಇಲ್ಲ. ನಿಮಗೇನಾದರೂ ಸಹಾಯಬೇಕಿದ್ದರೆ.'

' ಸಹಾಯ ಬೇಕೆಂದು ಕೇಳುವಷ್ಟು ಸಹನ ಶಕ್ತಿ ನನಗೆ ನಿಜಕ್ಕೂ ಉಳಿದಿಲ್ಲ.... ಇರಲಿ. ನೀವು ಸತ್ಯವಾದ ವರ್ತನೆಯನ್ನೇ ಇಟ್ಟುಕೊಂಡಿದ್ದೀರಾ ? '

' ಸತ್ಯವಾಗಿ ! ದೇವರಾಣಿ !! '

' ದೇವರಾಣೆ ಎಂದು ಹೇಳಿ ದೇವನಿಗೆ ದ್ರೋಹ ಬಗೆವ ದೌರ್ಜನರು ಈ ಲೋಕದಲ್ಲಿ ಇಲ್ಲವೆನ್ನುತ್ತೀರಾ ? '

' ಹಾಗೇನಿಲ್ಲ. ಲೋಕದ ಅಂತರಾಳವನ್ನು ಅಳೆಯುವದು ಅಷ್ಟು ಸುಲಭಸಾಧ್ಯವಲ್ಲ. '

' ಸರಿ ನಾನು ಕಂಡುದು ಮಾತ್ರ ಕರಾಳ ಕತ್ತಲೆ. ಬೆಳಕು ಇಲ್ಲವೆನ್ನಲಾಗದು. ಎಲ್ಲಿಯೋ ಅದು ಇದ್ದಿರಬೇಕು. '

' ಹೌದು ನೀವು ವಿಶ್ವಾಸವಿಟ್ಟು ಹೇಳಿದರೆ.... ಉಪಕಾರವಾಗುವದು. ಅಯ್ಯೋ ! ಎಲ್ಲಿಗೆ ಹೊರಟಿರಿ. ನಿಲ್ಲಿರಿ ತಾಯೀ ! ನಾನು ನಿಮ್ಮ ಸೋದರ. ನನ್ನೆದುರಿಗೆ ನಿಮ್ಮ ಅಂತರಂಗವನ್ನು ಬಚ್ಚಿಡುವಿರಾ ? ಅಯ್ಯೋ ಎಲ್ಲಿಗೆ ಹೊರಟಿರಿ....'

' ಆತ್ಮಶಾಂತಿ ಸಿಗುವಲ್ಲಿಗೆ. '

' ಏಕೆ ಇಲ್ಲಿಲ್ಲವೆನ್ನುತ್ತೀರಾ ? '

' ಇಲ್ಲಿರುವುದೆಲ್ಲಾ ಹೇಸಿ ರೋಷ. ಈ ಜಗತ್ತಿನಲ್ಲಿ ಇರುವುದೆಲ್ಲ ಬರಿಯ ಪಾಪ ! ಇದು ಕೇವಲ ನನ್ನ ದೃಷ್ಟಿಯಲ್ಲಿ ಮಾತ್ರ '

' ಇಲ್ಲ. ಹಾಗೆನ್ನಬೇಡಿ. ಒಳ್ಳೆಯವರಿಲ್ಲದಿದ್ದರೆ. ಸೂರ್ಯೋದಯ ಚಂದ್ರೋದಯಗಳಾಗುತ್ತಿರಲಿಲ್ಲ. ತಾಯಿ, ಅಂಥ ಮಹಾನುಭಾವರಿರುವರೆಂದೇ ಸೃಷ್ಟಿ ಸೊಗಸಾಗಿದೆ.'

' ಸರಿ ನಾನು ಒಪ್ಪುತ್ತೇನೆ. ಹಾಗಾದರೆ ಪುಣ್ಯಜೀವಿಗಳು ಇರುವ ತಾವೆಲ್ಲಿ ? '

' ಇಲ್ಲಿಯೇ.... '

' ನಾನೆಂದೂ ಒಪ್ಪಲಾರೆ ಈ ಲೋಕದ ಕಣ್ಣು ಅವರನ್ನು ವಾಸ್ತವಿಕ ವಾಗಿಯೇ ಕಾಣುವದೇ. '

'.........'

' ಏಕೆ ಮೌನವಾದಿರಲ್ಲ ..'

' ಈ ಮಾತಿಗೆ ಮೌನವೇ ಲೇಸು! ಇರಲಿ. ಇಷ್ಟೊಂದು ಅನು ಭವ ಬರಲು ಘಟನೆ ಏನಾದರೂ...'

' ಅವೆಲ್ಲ ಅಘಟಿತ ಘಟನೆಗಳು... ನೀವು ನನ್ನಿಂದ ಮರೆಯಾಗಿರಿ. ನಾನೆಲ್ಲಿಗಾದರೂ ಹೋಗುತ್ತೇನೆ.'

' ತಾಯೀ ! ನಿಮ್ಮ ಅನುಭವವನ್ನು ವಿವರಿಸಲೇಬೇಕು.'

' ಬೇಡ. ನಾನು ಹೊಲತಿಯ ಹೊಟ್ಟೆಯಲ್ಲಿ ಹುಟ್ಟಿದವಳು. ನನ್ನ ಜೀವನವಾದರೂ ಹೇಸಿಪೂರಿತವಾಗಿದೆ.'

' ಅದಕ್ಕೇನು ಹೇಳಿರಿ ತಾಯಿ. ನೀವು ಹೊಲತಿಯಾಗಿದ್ದರೂ ಚರಿತೆ ಹಾಗಿರಲಿಕ್ಕಿಲ್ಲ...'

' ಅಯ್ಯೋ! ಅದೆಲ್ಲಾ ನಿಮ್ಮ ಕಲ್ಪನೆ...... ಕಲ್ಪನೆಯಲ್ಲಿ ಕಂಡ ಲೋಕಕ್ಕೂ ವಾಸ್ತವಲೋಕಕ್ಕೂ ಮಹದಂತರವಿದೆ. ಒಂದು ರೀತಿಯಿಂದ ಕಲ್ಪನಾ ಜೀವಿಗಳಾಗಿ ಬಾಳುವದೇ ಒಳ್ಳಿತವಾದುದು...'

' ಅದೇನೇ ಇರಲಮ್ಮಾ! ಬೇರೇ ಏನೂ ಭಾವಿಸದೆಯೇ ನಿಮ್ಮ ಚರಿತೆಯನ್ನಷ್ಟು ಹೇಳಿ ಉಪಕಾರ ಮಾಡಿರಿ.'

‘ ಬೇಡ ನನಗಿರುವ ಬಾಳಿನ ಕಹಿಫಲದ ನಂಜು ನಿಮ್ಮಂತ ಎಳೆಜೀವ ನಕ್ಕೆ ಬೇಡ. **ಅವರವರ ಕರ್ಮ ಅವರವರ ಬೆನ್ನಿಗೆ**...... ಸರಿ. ನೀವು ಮರೆಯಾಗಿರಿ. ನಾನು ಹೊರಡುತ್ತೇನೆ......’

‘ ಬೇಡಮ್ಮಾ ರಾತ್ರಿಯ ಸಮಯ ಎಲ್ಲಿಗೆ ಹೋಗುವದಾಗುತ್ತದೆ? ನನ್ನ ಮನೆಗೆ ಬಂದು ನನ್ನವಳೊಡನೆ ಈ ರಾತ್ರಿ ಕಳೆದು ನಾಳೆಗೆ ಹೋಗು ವಿರಂತೆ...’

‘ ಅಯ್ಯೋ ! ಆ ದಿನ ಆ ಊರಲ್ಲಿ ಹೀಗೆಯೇ ಕತ್ತಲೆಯಾಗಿತ್ತು. ಎಲ್ಲೆಲ್ಲೂ ನೆಲೆಯೂರಿ ನಿಂತ ಕತ್ತಲು. ಕಣ್ಣಿದ್ದರೂ ಏನೂ ಕಾಣಿಸುವಂತಿರ ಲಿಲ್ಲ. ಆಗ ಈ ಲೋಕದ ಕಣ್ಣೆಂದರೆ ಕತ್ತಲೆ !... ’

‘ ಅಳುನುಂಗಿ ಆ ಕಥೆ ಹೇಳು ತಾಯಿ ! ’

‘ .....ಹೀಗೆಯೇ ಅಳುತ್ತ, ಕಣ್ಣೀರಿನೊಡನೆಸಹಕರಿಸುತ್ತ ಆ ಊರ ಹೊರಗಿನ ಬಂಡೆಗಲ್ಲಿನ ಮೇಲೆ ಕುಳಿತುಕೊಂಡಿದ್ದೆ. ಆಗ ನನ್ನ ಜೀವನದಲ್ಲಿ ‘ ಏರಿಳಿತ ’ದ ಪ್ರಶ್ನೆ ಪೆಡಂಭೂತಾಕಾರದಲ್ಲಿ ನಿಂತಿದ್ದಿತು. ಆ ಮನುಷ್ಯ, ಅಲ್ಲ ಲೋಕದ ದೃಷ್ಟಿಯಲ್ಲಿ ಮನುಷ್ಯ; ನನ್ನ ತಿಳುವಳಿಕೆಗೆ ಅವನು ಮಾನವನಲ್ಲ ದಾನವ...’

‘ ಇರಲಿ ಮುಂದೇನಾಯಿತು...? ’

‘ ಯಾರವರು ? ಎಂದು ಕೂಗಿದ. ನಾನು ಮೈಎಲ್ಲಾ ಕಣ್ಣಾ ದಂತೆ ಸುತ್ತಲೂ ನೋಡಿದೆ. ಆ ವ್ಯಕ್ತಿ ನನ್ನೆದುರಿಗೇ ನಿಂತಿದ್ದನು. ಸನಿ ಹಕ್ಕೆ ಬಂದು ನಿಂತು ಮತ್ತೆ ಕೇಳಿದ.

‘ ಯಾರು ನೀನು ? ’

‘.........’ ನನ್ನ ಮಾತುಗಳೇಕೋ ಹೊರಡಲಿಲ್ಲ. ಅವನು ಮತ್ತೆ ಕೇಳಿದ.

‘ ಹೇಳುವೆಯೋ ಇಲ್ಲವೋ......’ ಆಗ ನಿಜಕ್ಕೂ ಹೆದರಿದೆ. ಅವನು ಅತೀ ಆತುರನಾಗಿದ್ದ; ಅದೇತಕ್ಕೋ ನಾನು ಕಾಣೆ. ನನ್ನ ಕಣ್ಣೀರು ದಳ ದಳನೆ ಸುರಿದು, “ ನಾನು ಈ ಲೋಕದ ಕಣ್ಣಿನಿಂದ ಅಲಿಪ್ತಳಾಗಿ ಉಳಿಯ ಬಯಸುವವಳು ” ಎಂದು ಸೂಚಿಸಿದವು. ಮಾನವ ಜಾತಿಯ ದಾನವ. ನನ್ನ ಮುಂಗೈ ಹಿಡಿದು ಮೋರೆಯನ್ನು ಮೇಲೆತ್ತಿದ. ಆಗ ಅವನ ಕಣ್ಣುಗಳಲ್ಲಿ ಕಾಮದ ಕಿಡಿ ಸೂಸಿದವು. ನಾನು ಮೌನವನ್ನು ಭೇದಿಸಿ,

‘ ನಾನು... ಸ್ವಾಮಿ ! ಹೊಲತಿ...! ’ ಎಂದೆ. ಆಗ ಆ ಮನುಷ್ಯ ನನ್ನಿಂದ ದೂರ ಸರಿದು ನಿಂತು “ ಥೂ...ಹೊಲತಿ! ಮೊದಲೇ ಹೇಳ ಬಾರದೆ. ನಿನ್ನನ್ನು ಮುಟ್ಟಿಬಿಟ್ಟೆನಲ್ಲಾ. ಹೂಂ- ಯಾರಿಗಾಗಿ ಕಾಯು ತ್ತಿಯೇ...’ ಎಂದು ಮೈ ಕೈ ಧೂಳು ಕೊಡವಿಕೊಂಡ. ಆಗ ನನಗೆ ಸಮಾಧಾನ ಎನಿಸಿತು. ಆ ಕಾಮುಕನ ಪಾಶದಿಂದ ಪಾರಾದೆನಲ್ಲಾ ಎಂದು ಕೊಂಡು, ಅವನಿಗೆ ಸಾವಿರುಸಲ ಮನದಲ್ಲಿಯೇ ವಂದಿಸಿ ಮುದುಡಿ ಕುಳಿತೆ. ಆಗ ಅವನು ಮತ್ತೆ ಕೇಳಿದ.

‘ ನಿನ್ನದು ಯಾವ ಊರು ? ’

‘ ಆ ದಿಬ್ಬದ ಬಳಿ ಇರುವ ಚನ್ನಳ್ಳಿ...’

‘ ಓಹೋ... ಚನ್ನಳ್ಳಿಯ ಜುಂಜನ ಮಗಳು ಸುಂದರಿಯೇ......? ’ ಎಂದು ಬಂದವನೇ ಮತ್ತೆ ಎರಡೂ ಕೈ ಹಿಡಿದು ಮುಂದೆಲೆಯ ಮೇಲಿದ್ದ ಸೀರೆಯ ಸೆರಗನ್ನು ಹಿಂದೂಡಿದ.

ನಾನಾಗಲೇ ಚೀರಿಕೊಂಡೆ ‘ ಅಯ್ಯೋ ! ನಾನು ಹೊಲತಿ. ನೀವು ಮಡಿವಂತರು. ಮುಟ್ಟಬೇಡಿ ತಂದೆ ’ ಎಂದು ಕೂಗಿಯೇ ಕೂಗಿದೆ. ಅವನಿಗೆ ಕರುಣೆ ಬರಲಿಲ್ಲ.

‘ ನೀನು ಹೊಲತಿ ಯಾದರೇನು. ನನ್ನೆದೆಯ ರಾಣಿ ’ ಎಂದು.

‘ ಇರಲಿ. ತಾಯೀ ಅಳಬೇಡ, ಮುಂದೆ ಆ ನರಪೇತು ಏನು ಮಾಡಿದ ? ಅಯ್ಯೋ ಪಾಪ ! ಇರಲಿ. ಅಳಬೇಡಮ್ಮ...... ಮುಂದೇ ನಾಯಿತು ? ’

‘ ಏನೆಂದರೆ ಏನು ಹೇಳಲಿ ? ಅವನ ಕಲುಷಿತ ಹೃದಯ ಏನನ್ನೋ ಬಯಸಿತು. ನೀನು ಹೊಲತಿಯಾದರೂ ಚಿಂತೆಯಿಲ್ಲ. ನೀನೀಗ... ’ ಎಂದವನೇ ಮೋರೆಗೆ ಮೋರೆ ಹೊಂದಿಸಲುದ್ಯುಕ್ತನಾದನು. ನಾನು ಅದೆಷ್ಟೇ ಚಟಪಡಿಸಿದರೂ ಅವನು ಕೇಳಲಿಲ್ಲ. ನನ್ನ ಮೃದು ಗಲ್ಲದ ಮೇಲೆ....’

“ಅಯ್ಯೋ ! ಕೇಳಬಾರದು. ತಾಯಿ ಮುಂದೇನಾಯಿತು ? ” ನಾನು ಗಟ್ಟಿಯಾಗಿ ಚೀರಿಕೊಂಡೆ ಬಲವಾಗಿ ಭೋರಿಟ್ಟೆ. ಸುತ್ತಲಿನ ಹೊಲದ ಆಳುಗಳು ಮುತ್ತಿದರು. ಆಗ ಆ ನರಪೇತು ಎಲ್ಲಿಯೋ ಮಾಯ ವಾದನು. ಸುತ್ತಲೂ ರಾತ್ರಿ ಹೊಲಕಾಯುವ ಆಳುಗಳು ಕಲೆದರು ವಿಪರೀತಾರ್ಥದಲ್ಲಿ ಮಾತು ಮುಂದರಿಸಿದರು. ಅವರಲ್ಲಿ ಒಬ್ಬನು ಮಾತ್ರ

‘ ಇವಳಾರೋ ಗೊತ್ತಾಗಲಿಲ್ಲ......’ ಎಂದ ಮಾತು ನನಗೆ ಅಸ್ಪಷ್ಟ ವಾಗಿ ಕೇಳಿಸುತ್ತಲೇ ಕೂಗಿಕೊಂಡೆ.

‘ ಯಾರೋ ಚೋರರೈವರಿದ್ದರು. ಆ ಎರಡೂ ಹೊಲದ ಬೆಳೆಯನ್ನು ಕೊಯ್ದಿದ್ದರು. ತೆನೆಗಳನ್ನು ಚಂಡಾಡಿ ಮುಂದೆ ಸಾಗಿಸಿದರು. ನಾನು ಅವರನ್ನು ಪ್ರತಿಭಟಿಸಿದೆ. ನಮ್ಮ ಹೊಲದಲ್ಲಿಯೂ ಹಾಗೆಯೇ ಮಾಡಿ ದ್ದಾರೆ. ಅಯ್ಯೋ ! ನೋಡಿರಿ. ಹೇಗೆ ಓಡುತ್ತಾರೆ.’ ಎಂದು, ಆ ನೆರೆದ ಜನರು ನನ್ನಿಂದ ಕದಲುವಂತೆ ಅಕಲು ಹಾಕಿ ನುಡಿದೆ. ಅವರೆಲ್ಲರೂ ಹುಯ್...ಓ ! ಹೊ... ಎನ್ನುತ್ತ ಓಡಿದರು.’

‘ ಸರಿ ಮುಂದೇನಾಯಿತು...? ’

‘...ನಾನು ಮೆಲ್ಲನೇಅಲ್ಲಿಂದ ಕಾಲ್ದೆಗೆದೆ, ಎಲ್ಲೆಲ್ಲಿಯೋ ಅಲೆದು ನಾನೇ ತಿಳಿಯದಂತೆ ನಮ್ಮೂರಿಗೆ ಹೋಗಿ ಮನೆಯ ಮುಂದೆ ನಿಂತು ಭೋರಿಟ್ಟೆ ! ’

‘ ಏಕೆ ಮನೆಯಲ್ಲಿ ಯಾರೂ ಇದ್ದಿರಲಿಲ್ಲವೆ ? ’

'ಅಯ್ಯೋ! 'ಮನೆ' ಎಂದರೆ ಅದೊಂದು ಪುರಾಣವೇ ಇದೆ. ಬೇಡ. ನಿಮಗೂ ಹೊತ್ತಾದೀತು. ನಾವೀರ್ವರೂ ಇಲ್ಲಿದ್ದುದನ್ನು ನೋಡಿ ಯಾರಾದರೂ ಏನಾದರೂ ತಿಳಿದುಕೊಂಡಾರು. ಸರಿ ನಾನು ಬರುತ್ತೇನೆ.'

'ಇಲ್ಲ ಲೋಕದಿಚ್ಛೆಗನುಗುಣವಾಗಿ ನಡೆಯಲು ಯಾರಿಗೂ ಸಾಧ್ಯವಿಲ್ಲ! ಈ ಕೆಲಸ ದೇವನಿಂದಲೂ ಆಗಿಲ್ಲ......ಅಮ್ಮಾ, ಎಲ್ಲವನ್ನು ಹೇಳಲೇಬೇಕು. ಏಕೆ ಮನೆಯವರಿದ್ದಿಲ್ಲವೇ?'

'ಎಲ್ಲರೂ ಇದ್ದರು. ಆದರೆ ಈಗ ಇಲ್ಲವಾದರು...'

'ಆ ರಾತ್ರಿಯ ಮುನ್ನಾದಿನ ಊರಿನಿಂದಲೇ ಬಂದಿದ್ದೆ. ಅಲ್ಲಿಗೆ ಹೋಗಬಾರದೆಂದು ನಿರ್ಧರಿಸಿದ್ದರೂ ನಾನೇ ತಿಳಿಯದಂತೆ ಹೋದೆ. ಆಗ ಬೆಳಗಾಗುವ ಸಮಯ. ಭಗ್ನ ದೃಶ್ಯ ಎದೆ ಕೊರೆಯುವಂತಿದ್ದಿತು. ಅರ್ಧ ಸುಟ್ಟು ತಣ್ಣಗಾದ ಕಟ್ಟಿಗೆಯ ತುಣುಕುಗಳು, ಸುತ್ತಲೂ ಬೂದಿಯು ಗಾಳಿಗೆ ಹಾರುತ್ತಿತ್ತು. ಮನೆಗೆ ಬೆಂಕಿ ಹತ್ತಿ ಉರಿಯುತ್ತಿದ್ದಾಗ, ಒಳಗಿದ್ದ ಮಣ್ಣಿನ ಮಡಿಕೆಗಳು ಸಿಡಿದು ಪುಡಿ ಪುಡಿಯಾಗಿದ್ದ ಚೂರುಗಳು ಹರವಿದ್ದವು. ನನ್ನ ಬಾಳಿನ ಬಿಂದಿಗೆಯೂ ಪುಡಿಯಾಗಿ ಬೂದಿಯಲ್ಲಿ ಬೆರಿತಿದ್ದಿತು. 'ಗುಡಿಸಲು'! ಹೀಗೆಂದರೆ ಯಾರೂ ನಂಬರು. ಅಯ್ಯೊ! ನಾನು ಮುನ್ನಾದಿನ ಮನೆ ಬಿಟ್ಟಾಗ ಬೆಂಕಿ ಭುಗಿಲೆನ್ನುತ್ತಿದ್ದಿತು.'

'ಅಯ್ಯೋ ಹೀಗೇಕಾಯಿತು ತಾಯಿ?'

'...ಹೀಗೇಯೇ ಅದೃಷ್ಟದ ಆಟ ನಡೆದೇ ಇದ್ದಿತು. ಆಗಿನ ನನ್ನ ಜೀವಿತವೇ ವಿಚಿತ್ರವಾದುದು. ಆ ರೀತಿ ಇನ್ನಾವ ಸೋದರಿಯರಿಗೂ ಬರದಿರಲಿ......'

......ನಾನು ಬೆಳೆದು ದೊಡ್ಡವಳಾಗುವವರೆಗೂ ನನಗೆ ಈ ಜಗತ್ತಿನ ಅನುಭವವಿರಲಿಲ್ಲ, ಹಸುಳೆತನದ ಹಾಲುಗಡಲಿನಲ್ಲಿ ಬಿದಿಗೆಯ ಚಂದ್ರಮನಂತೆ ಬೆಳೆದೆ. ನಾನು ಜಾತಿಯಿಂದ ಹೊಲತಿ. ಮನೆತನದಿಂದ

ಬಡವಿ. ಆದರೂ ತಂದೆ ತಾಯಿಗಳು ತಮ್ಮ ಪ್ರಾಣದಂತೆ ಜೋಕೆ ಮಾಡಿದರು. ನಾನು ತುಂಬು ಮೈಮೊಗದಿಂದ ನಲಿಯುವವರೆಗೂ ತಾಯಿ ತಂದೆಗಳು ಹೊಟ್ಟೆತುಂಬ ಉಣ್ಣಲಿಲ್ಲ; ಉಡಲಿಲ್ಲ. ನನಗಾಗಿಯೇ ಅವರೆಲ್ಲರ ಸೊತ್ತು ಮೀಸಲಾಗಿತ್ತು !

ನಮ್ಮ ಮಾದಿಗರ [ಹರಿಜನರ] ಓಣಿಯಲ್ಲಿ ಅಷ್ಟೇ ಅಲ್ಲ. ಮಡಿವಂತಿಕೆಯ ಬೂಟಾಟಿಕೆಯಿಂದ ಮೆರೆದಾಡುವ ಊರವರಲ್ಲಿಯೂ ನನ್ನಷ್ಟು ಸುಂದರ ಸ್ತ್ರೀ ಇದ್ದಿರಲಿಲ್ಲವೆಂದು ಜನರಾಡುತ್ತಿದ್ದರು; ಹೊಗಳುತ್ತಿದ್ದರು. ನನ್ನ ಹೆಸರು. 'ನೀಲಾ' ಎಂದಿದ್ದರೂ... ಊರಿನ ಜನರು 'ಸುಂದರಿ' ಎಂದೇ ಕರೆಯುತ್ತಿದ್ದರು. ಅಂತೂ ಬೆಳೆದು ದೊಡ್ಡವಳಾದೆ. ನನ್ನ ಜೀವನಕ್ಕೆ ನಾನೇ ಮುಳುವಾದೆ !

......ನಮ್ಮ ಓಣಿಯಲ್ಲಿ ಜನರೆಲ್ಲ, ಕಣ್ಣಿಟ್ಟರು. ಅಂತೆಯೇ ಊರವರೂ ಸಹಿತ ಮೋಹಿಸುತ್ತಿದ್ದರು. ಜೀವನದ ವಿವಿಧಾಂದಗಲ್ಲೂ ಜಾತಿಯ ವಿಷಗಾಳಿ ಬೀಸುತ್ತಿದ್ದರೂ ನನ್ನೊಡನೆ ಮಾಂಸದ ಮೋಹವನ್ನು ಹಿಂಗಿಸಿಕೊಳ್ಳಲು ಯಾರೂ ಹಿಂಜರಿಯಲಿಲ್ಲ. ಅವರಿಗೆ ಮೇಲು-ಕೀಳು ಎಂಬ ಕಲ್ಪನೆ ಬರಲಿಲ್ಲ. 'ಹೊಲತಿ......' ಕುಲದವಳಾಗಿದ್ದರೂ ನಾನು ಹೊಲತಿಯಾಗಿರಲಿಲ್ಲ, ಸುಂದರಿಯಾಗಿದ್ದೆ.

ಊರ ತರುಣರಷ್ಟೇ ಅಲ್ಲ, ಒಳ್ಳೊಳ್ಳೆಯ ಯಜಮಾನರೂ ಸಹಿತ ಮೋಹಗೊಂಡರು. ನನ್ನ ತಂದೆ-ತಾಯಿಗಳನ್ನು ಕರೆಸಿ, ಹಣದ ಆಶೆ ತೋರಿಸಿದರು. ಬಡತನದ ಬೆನ್ನಿನಮೇಲೆ, ಶ್ರೀಮಂತಿಕೆಯ ಬೆಟ್ಟದ ಭಾರವನ್ನು ಹೇರಲು ಹವಣಿಸಿದರು ! 'ನಿನ್ನ ಮಗಳನ್ನು ಯಾವಾಗ ಕಳಿಸುವಿ ?' ಎಂದು ಕೇಳುತ್ತಿದ್ದರಂತೆ. ತಂದೆಯವರಿಗೆ ಅಲುಗಿನ ಮೇಲೆ ನಡೆದಂತಾಯಿತು. ಒಂದು ಕಡೆ ಮಗಳ ಸೌಭಾಗ್ಯ; ಒಂದು ಕಡೆ ಅತ್ಯಂತ ಹೇಸಿ ವ್ಯವಹಾರ—ನೀವು ಏನಾದರೂ ತಿಳಿದುಕೊಳ್ಳಿರಿ ನಾವು ಜಾತಿಯಿಂದ ಹೊಲೆಯರಾಗಿದ್ದರೂ ನೀತಿಯಿಂದ ಸುಸಂಪನ್ನರಾಗಿದ್ದೆವು. ನೀತಿಗೆ ಜಾತಿ ಮತ ಪಂಥಗಳ ಕೊಳಚೆ ಅಂಟಲಾರದಷ್ಟೇ ?

‘ ಇರಲಮ್ಮ ಮುಂದೆ ಆ ಕಥೆ ಎಲ್ಲಿಗೆಬಂತು ? ’

‘ಜೀವನ ಜಡವಾಯಿತು. ಬಡವರಾಗಿ ಬಾಳಿದರೂ ಬಡತನದಲ್ಲಿ ಸತ್ಯ, ಸೌಂದರ್ಯವಿರಬಾರದೆಂದೆನಿಸಿತು,’ ಎನ್ನುತ್ತಲೇ ನನ್ನ ತಂದೆ ವ್ಯಸನಕ್ಕೊಳಗಾದರು ನಿಟ್ಟುಸಿರಿನೊಡನೆ ಜೀವನ ನಡೆಸಿದರು. ಕಣ್ಣೀರಿನ ನೈವೇದ್ಯವನ್ನು ಹೃದಯಕ್ಕೆ ನೀಡಿದರು. ‘‘ಅಯ್ಯೋ! ಮಗಳ ಭಾಗ್ಯದ ಸುದಿನವನ್ನು ಕಾಣಲಿಲ್ಲ. ಈ ಹಾಳು ಸಮಾಜದಲ್ಲಿ ಬಡವರು ಬಾಳುವದು ಕಷ್ಟ ! ಅಯ್ಯೋ ! ಈ ಲೋಕದ ಕಣ್ಣಿನಲ್ಲಿ ಎಷ್ಟೊಂದು ಪ್ರಗಾಢ ಪ್ರಕೋಪ ಪ್ರಜ್ವಲಿಸುತ್ತಿದೆ ! ಹಾಯ್ ಎಂದು ನೆಲಹಿಡಿದು ನುಡಿದರು. ‘ಯಾರು ಎಂತಾದರೂ ನೀನು ನಿನ್ನದನ್ನು ಕಾಯ್ದುಕೊಳ್ಳಮ್ಮಾ’... ಎಂದು ಕಣ್ಣು ಮುಚ್ಚಿದರು......”

‘‘ ಅಯ್ಯೋ ! ಪಾಪ ! ಧಿಕ್ಕಾರ ಈ ಹಾಳು ಸಮಾಜಕ್ಕೆ ! ಇರಲಿ ಅಳಬೇಡಮ್ಮ...ಮುಂದೇನಾಯಿತು ? ”

‘ ತಾಯಿಯೊಬ್ಬಳೇ ಕೂಲಿಮಾಡಿ ಕುಟುಂಬವನ್ನು ಸಾಗಿಸಿದಳು. ನಾನು ಆಗಲೇ ಪ್ರಾಥಮಿಕ ಅಭ್ಯಾಸವನ್ನು ಮುಗಿಸಿ ಶಾಲೆಬಿಟ್ಟು ಮನೆಯಲ್ಲಿದ್ದೆ...”

ಅಯ್ಯೋ ! ಅರಣ್ಯದಲ್ಲಿ ಸತ್ತಪ್ರಾಣಿಯ ಮಾಂಸವನ್ನು ತಿಂದು ತೇಗಲು ಹದ್ದು—ಕಾಗೆಗಳು ಕಲೆಯುವಂತೆ ನನ್ನೂರ ಕಾಮುಕರು ನನ್ನ ಸುತ್ತು ನೆರೆದರು ! ತಾಯಿಯೂ ಆ ಸಮಯಕ್ಕೆ ನೆಲಹಿಡಿದಿದ್ದಳು. ನನ್ನ ಜೀವನವು ಅವಳಿಗೆ ಕಂಟಕಪ್ರಾಯವಾಗ ಪರಿಣಮಿಸಿತು. ಓಣಿ, ಊರ ಜನರಿಂದ ದೂರೀಕರಿಸಲ್ಪಟ್ಟಳು. ಅವಳೂ ಇಂದೋ ನಾಳೆಯೋ ಎನ್ನುವಂತಾದಳು...... ’’

ನನ್ನೂರ ಗೌಡರೂ ನನ್ನಿಂದ ನಿರಾಕರಿಸಲ್ಪಟ್ಟರು. ತರುಣರಂತೂ ಮನೆಗೆ ಮುತ್ತಿಗೆ ಹಾಕುತ್ತಿದ್ದರು ನೀವೇ ಹೇಳಿರಿ ನನ್ನ ಸ್ಥಿತಿ ಆಗ ಹೇಗಾಗಿರಬಹುದು ?

ಅಯ್ಯೋ ! ವರ್ಣನಾತೀತ. ಮುಂದೇನಾಯಿತು?
'ಹಾಗೆಯೇ ಆ ಸ್ಥಿತಿಯೇ ಮುಂದುವರಿಯಿತು. ತಾಯಿ ಕಣ್ಣು ಬಿಡುತ್ತಿದಳು. ಆಗ ನನ್ನೂರ ಸಾವುಕಾರರು ನನ್ನನ್ನೇ ಕರೆಕಳುಹಿದರು. ನಾನು ಅವರ ಮನೆಗೆ ಹೋಗಲಿಲ್ಲ.... ಅಂದಿನಿಂದ ಅವರು ನಿತ್ಯವೂ ಓಲೆ ಬರೆದು ಕಳುಹುತ್ತಿದ್ದರು.

'ನೀನು ನನ್ನ ವಶವಾದರೆ ನಿನಗೆಲ್ಲವೂ ಉಂಟು. ಸುಮ್ಮನೇ ತೊಂದರೆ ಪಡಬೇಡ! 'ನಾನು ಹೊಲೆಯನ ಮಗಳು' ಎಂದು ಅಂಜಬೇಡ, ನಾನು ಜಾತಿವಾದಿ ಅಲ್ಲ. ನನ್ನದು ಸಮತಾವಾದ. ಎಲ್ಲ ಜಾತಿಯ ಜನರೂ ಅಷ್ಟೇ!' ಎಂದು ಮಹಾ ಮಹಾ ತತ್ವವನ್ನೇ ಪ್ರತಿಪಾದಿಸುತ್ತ ನನ್ನನ್ನು ಸೆರೆಹಿಡಿಯಲು ಹವಣಿಸಿದರು. ಅದು ಸಾಧ್ಯವಾಗಲಿಲ್ಲ. ಆ ಸಮಯ ಇನ್ನೊಂದು ಘಟನೆ ನಡೆದು ಹೋಯಿತು.

ನಮ್ಮ ಓಣಿಯ ಮಾದಿಗರೆಲ್ಲ ಒಟ್ಟಿಗೆ ಕಲೆತು ವಿಚಾರಿಸಿದರು. ಕೊನೆಯದಾಗಿ ನಮ್ಮ ಜಾತಿಯ ಶಿಷ್ಟ ಸಂಪ್ರದಾಯದಂತೆ ನನ್ನನ್ನು ಆ ಊರ ಸೂಳೆಯನ್ನಾಗಿ ಹುಲಿಗೆಮ್ಮನ ಹೆಸರಿನಿಂದ ಬಿಡಬೇಕೆಂದು ತೀರ್ಮಾನಿಸಿ ಬಿಟ್ಟರು. ನನಗೂ ಆ ವಿಷಯವನ್ನು ತಿಳಿಸಿದರು...''

"ನೀವು ಅದಕ್ಕೆ ಒಪ್ಪಿಗೆ ಕೊಟ್ಟಿರಾ ?"

"...... ಹಾಗೆ ಒಪ್ಪಿಗೆ ಕೊಟ್ಟಿದ್ದರೆ ನಾನು ಆ ಊರ ರಾಣಿಯಾಗಿ ಮೆರೆಯಬಹುದಾಗಿತ್ತು. ಶ್ರೀಮಂತರ ಒಡಲಿನ ರಕ್ತವನ್ನು ಹೀರಿ ಮೆರೆಯುವ ಮಾರಿಯಾಗಿ ಮೆರೆದಾಡ ಬಹುದಾಗಿತ್ತು. ತರುಣರನ್ನು ಮೋಹಿಸಿ, ಅವರನ್ನು ಸೆರೆ ಹಿಡಿದು, ಗಾಣದಲ್ಲಿ ಸಿಲುಕಿಸಿದ ಕಬ್ಬಿನಂತೆ ಮಾಡಿ ಬಿಡಬಹುದಾಗಿತ್ತು."

"ಇರಲಿ ಮುಂದೇನಾಯಿತು ......?"

...... ನಾನಾವುದಕ್ಕೂ ಸಮ್ಮತಿ ಸೂಚಿಸಲಿಲ್ಲ. ಪ್ರತಿ ದಿನದಂತೆ ಆದಿನ ಆ ಸಾವುಕಾರನು ಓಲೆ ಬರೆದು ಕಳುಹಲಿಲ್ಲ. ತಾನೇ ಸ್ವತ: ಬಂದು

ಬಿಟ್ಟನು. “ ಹರಿಜನ ಬಾಲಿಕಾಶ್ರಮ ” ವನ್ನು ತೆಗೆಯಬೇಕು. ಅದಕ್ಕೆ ಸುಂದರಮ್ಮನೇ ಅಧ್ಯಕ್ಷಿಣಿಯಾಬೇಕು ಎಂದು ನಮ್ಮ ಓಣಿಯ ಇನ್ನುಳಿದ ಜನರಿಗೆ ತಿಳುಹಿ, ಒಂದು ಸಭೆಯನ್ನೇ ಸೇರಿಸಿದನು. ಆಗ ನಾನು ಅಲ್ಲಿಗೆ ಹೋಗಲಿಲ್ಲ. ಕೊನೆಗೆ ಭಾಷಣ ಮುಗಿಸಿ ಆ ಸಾವುಕಾರನು, ಊರ ಓಲೇಕಾರನೊಂನಿಗೆ ನಮ್ಮ ಮನೆಯನ್ನು ಪ್ರವೇಶಿಸಿದನು.

ಧನಿಕರಿಗೆ ಸನ್ಮಾನ ಸಲ್ಲಿಸಲು ನನ್ನ ತಾಯಿ ಮಲಗಿದವಳು ಮೇಲೇಳಲು ಹೋಗಿ, ಹಾಳು ಹಾಸುಗೆಯಮೇಲೆಯೇ ತೂಕ ತಪ್ಪಿ ಬಿದ್ದಳು...... ನಾನು ಅವಳ ಆರೈಕೆಗಾಗಿ ನಿಂತುಕೊಂಡೆನಾದುದರಿಂದ ಬಂದ ಸಾವುಕಾರನಿಗೆ ಕೂಡ್ರಲು ಹೇಳಲಿಲ್ಲ........

“ ಹಾಗಾದರೆ ಹಾಗೆಯೇ ನಿಂತುಕೊಂಡನೇ ? ”

“ ಅದೇನಿಲ್ಲ. ನೆಲವನ್ನು ಊಬಿ ತಾನೇ ಕುಳಿತುಕೊಂಡು ಮಾತಿಗ್ಗಾರಂಭಿಸಿದ....... ಕೊನೆಗೆ ಆ ಮಾತನ್ನೂ ತೆಗೆದ.......

“ ನೀನಿನ್ನೂ ಹರೆಯದ ಹುಗೆ ಅನುಭವ ಸಾಲದು ”

“ ಹೌದು ಸಾವುಕಾರರೇ, ಅನುಭವ ನೀವು ಹೇಳುವಷ್ಟು ಸುಲಭವಿಲ್ಲ...”

“ ಹೌದು ನೀನು ಬಹಳ ಕುಶಲ ಬುದ್ಧಿಯುವಳು, ಅದಕ್ಕೆಂತಲೇ ನೀನು ಓಣಿಯ ಆಶ್ರಮಕ್ಕೆ ಅಧ್ಯಕ್ಷಿಣಿ ... ”

“ ಬೇಡ ಸಾವುಕಾರರೇ, ನೀವು ತಿಳಿದಷ್ಟು ನಾನು ಬುದ್ಧಿವಂತೆಯಿಲ್ಲಿ. ನನಗೆ ನಿಮ್ಮ ಯಾವ ಪದವಿಗಳೂ ಬೇಡ ...... ”

“ ಹಾಗಾದರೆ, ಎನ್ನುತ್ತ ಓಲೇಕಾರನನ್ನು ಮನೆಗೆ ಕಳುಹಿಸಿ, ತಾನು ಮತ್ತಷ್ಟು ಮುಂದೆ ಸರಿದು ಕುಳಿತುಕೊಂಡನು. ನನಗಾಗಲೇ ಪಿತ್ತ ನೆತ್ತಿಗೇರಿತು.

“ ಸಾವುಕಾರರೇ ನಿಮಗೆ ಮಕ್ಕಳು ಉಂಟೆ...... ? ”

“ ಉಂಟು ! ...... ಏಕೆ .... ?.... ”

“ **ಏಕೂ ಇಲ್ಲ. ಅವರನ್ನಾದರೂ ನೀವು ಮಕ್ಕಳ ಮನಸ್ಸಿನಿಂದ ನೋಡಿಕೊಳ್ಳುತ್ತೀರಾ ......?** ”

“ ಏಕೆ. ಸುಂದರೀಬಾಯಿ ಬಿಗಿಹಿಡಿ ...... ”

“ ಬಿಗಿಹಿಡಿದಿರುವೆನೆಂದೇ ಇಷ್ಟು ಗೌರವ ನಿಮಗೆ ಸಲ್ಲಿದೆ ......”

“ ಹೂಂ ಏನಂದಿ ... ಇನ್ನು ಐದು ನಿಮಿಷ ಅವಧಿ ....... ”

“ ಈ ಜನ್ಮದಲ್ಲಿ ಯಾರಿಂದರೂ ಸಾಧ್ಯವಿಲ್ಲ......”

‘ಹೂಂ. ನಾರಿ ಮುನಿದರೆ ಮಾರಿ, ಎಂದು ಕೇಳಿರುವಿರಲ್ಲವೆ ? ಸಾಕು, ಮರೆಯಾಗಿರಿ. ಸಮಾಜ ಸುಧಾರಕರ ಸೋಗಿನಲ್ಲಿ ಎಸಗುತ್ತಿರುವ ನಿಮ್ಮ ಹೇಸಿತನದ ಕೃತ್ಯಕ್ಕೆ ಕೊನೆ ಎಂದೋ ....... ನೀವು ಸಮಾಜ ಸುಧಾರಕರಲ್ಲ ದುರ್ಧಾರಕರು ...... ’

“ ಸುಂದರೀ ...... ನಿಜವಾಗಿಯೂ ಒಪ್ಪುವದು. ನೀನು ಹೊಲತಿಯಾಗಿದ್ದರೂ ನಿನ್ನ ರೂಪ ಅದನ್ನೆಲ್ಲ ಮರೆಮಾಚಿದೆ.... ”

“ ಸಾವುಕಾರರೇ, ಕನಸಿನ ಲೋಕದಿಂದ ಕೆಳಗಿಳಿಯಿರಿ. ಹೂಂ ... ಮನೆ ಬಿಟ್ಟು ನಡೆಯಿರಿ ...... ”

ಆಗಲೇ ತಾಯಿಗೆ ಅತ್ಯಂತ ವೇದನೆಯಾಗಿರಬೇಕು. ಕಣ್ಣೀರಿನ ಕೋಡಿ ಹರಿಸಿದಳು...... ನನ್ನನ್ನು ಅಪ್ಪಿಕೊಂಡು ಬಲವಾಗಿ ಭೋರಿಟ್ಟಳು. ಅತ್ತು ಅತ್ತು ಕಣ್ಣೀರ ಶಿಲೆ ಬತ್ತಿಹೋದಾಗ ತೊಯ್ದ ಶಿರಗನ್ನು ಹಿಂಡುತ್ತ ಹಿಂದಿರುಗಿದೆ. ಸಾವುಕಾರರು ಅಲ್ಲಿಂದ ಕಾಲ್ದೆಗದಿದ್ದರು.

“ ಮುಂದೇನಾಯಿತು. ಅಯ್ಯೋ ! ಕೇಳಬಾರದು ! ”

......ಅಂದೇ ಮಧ್ಯ ರಾತ್ರಿಯ ಸಮಯಕ್ಕೆ ನಾವೆಲ್ಲ ಗಾಢ ನಿದ್ರೆಯಲ್ಲಿದ್ದೆವು. ನಾನು ತಾಯಿಯ ತೋಳತೆಕ್ಕೆಯಲ್ಲಿದ್ದೆ. ಅವಳಿಗೆ ನಿದ್ರೆ ಹತ್ತಿದ್ದಿತು.

ಹಾಗೆನ್ನುವುದಕ್ಕಿಂತ ಅರಿವು ಇದ್ದಿರಲಿಲ್ಲ. ಅವಳ ಮೈಯೊಳಗಿನ ಜ್ವರದ ಉಗಿ ಅಟ್ಟುತ್ತಿದ್ದಿತಾದುದರಿಂದ ನನಗೆ ನಿದ್ದೆ ಬರಲಿಲ್ಲ. ಜೋಮಿನಲ್ಲಿದ್ದೆ ......... ತಿರುಗಿ ನಾನು ಕಣ್ಣು ತೆರೆದಾಗ ಗುಡಿಸಲು ಬೆಂಕಿಯ ಮಧ್ಯ ಎಲುವಿನ ಹಂದರದಂತೆ ನಿಂತುಕೊಂಡಿತ್ತು. ಸುತ್ತಲೂ ಬೆಂಕಿ ಭುಗಿಲೆನ್ನುತ್ತಿತ್ತು. ಅದೆಲ್ಲಾ ಕನಸಿನಲ್ಲಿ ನಡೆದ ಕಥೆ ಎಂದು ಭಾವಿಸಿದ್ದ ನಾನು ಧೀಂಕನೇ ಎದ್ದು ಚಿಟ್ಟನೇ ಚೀರಿದೆ.

“ ಅಯ್ಯೋ ! ನಿಮ್ಮ ತಾಯಿಗೇನಾಯಿತು. ? ಮತ್ತೆ ನೀವು ಹೇಗೆ ಪಾರಾದಿರಿ. ? ಆ ಓಣಿಯವರಾರೂ ಬಂದು ಆರಿಸಲಿಲ್ಲವೇ ? ”

“ ಯಾರೂ ಇಲ್ಲ. ತಾಯಿಯವರನ್ನಾದರೂ ಆ ಬೆಂಕಿಯಿಂದ ಹೊರ ದೆಗೆಯಲು ಬಹಳ ಪ್ರಯಾಸ ಪಟ್ಟೆ ! ಆದರೇನು ದೈವದಾಟ .......ಅವಳು ಆ ಬೆಂಕಿಯ ಮನೆಯಲ್ಲಿಯೇ ಮಲಗಿದ್ದಳು ...... ನಾನು ಆ ಕಾಮುಕರ ಕ್ರೂರ ಕಣ್ಣುಗಳಿಂದ ಪಾರಾಗಿಬಂದೆ ......”

“ ಅಯ್ಯೋ ! ಮುಂದೆ ಎಲ್ಲಿಗೆ ಹೋದೆ ತಾಯೀ ? ”

“ಎಲ್ಲಗೂ ಇಲ್ಲ. ಆ ದಿನ ಹಗಲು ಗುಡ್ಡದೋರೆಯ ಬಳಿಯಲ್ಲಿ ಅಡಗಿ ಕುಳಿತು, ಅಂಗಾಂಗಗಳನ್ನು ಸರಿ ಪಡಿಸಿಕೊಂಡೆ ಸುಟ್ಟ ಸೀರೆಯನ್ನು ಸರಿಯಾಗಿ ಉಟ್ಟು ಕೊಂಡೆ ...... ಒಂದು ಯುಗ ತಪವಂಗೈದು ಋಷಿ ಪಡೆದು ಕೊಂಡ ಸಿದ್ಧಿಯನ್ನು ನಾನು ಅಂದು ಒಂದು ದಿನದಲ್ಲಿಯೇ ಕಂಡು ಕೊಂಡೆ .......

“ ಸರಿ. ನಿಮಗೆ ದುಃಖವಾದೀತು. ......... ಇಲ್ಲಿಗೆ ನನ್ನ ಕಥೆ ಸಾಕು. ನಮಸ್ತೆ ! ದಯಮಾಡಿ ನೀವು ಮರೆಯಾಗುವಿರಾ ? ”

" ಅದೇನಿಲ್ಲಮ್ಮಾ! ನಿಮ್ಮ ಕಥೆಯಿಂದ ನಾನು ಅದೆಷ್ಟೊ ಪಾಠ ಕಲಿತು ಕೊಂಡಿದ್ದೇನೆ. ನನ್ನಲ್ಲಿಯೂ ಅದೇಷ್ಟೋ ಮಾರ್ಪಾಡಾಯಿತು... ನೀನು ನಿಜಕ್ಕೂ ನನ್ನ ತಾಯಿ ! "

" ಹಾಗೆಯೇ ಮುಂದೆ ಆ ರಾತ್ರಿ ಬಂಡೆಗಲ್ಲಿನ ಮೇಲೆ ಕುಳಿತು, ಆ ನರಪೇತುವಿನಿಂದ ಮಾನ ಉಳಿಸಿಕೊಂಡೆ ... ನಂತರ ಮನೆಗೆ ಹೋಗಿ ಗೋಳಿಟ್ಟೆ. ಮತ್ತೆ ಹಿಂದಿರುಗಿದೆ. ......

x x x x

"ಎಲ್ಲಿಯೋ ಅಲೆದೆ.ಕೆಲವೆಡೆಗೆ ಭಿಕ್ಷುಕಿಯ ಪಾತ್ರವಿತ್ತು. ಕೆಲವೆಡೆಗೆ ನಿರಾಶ್ರಿತೆ. ಇನ್ನೊಂದೆಡೆಗೆ ಕೂಲಿಯವಳು ......

ನಾನು ಯಾವ ವೇಷಧರಿಸಿದರೂ ಹೋದ ಹೋದಲ್ಲೆಲ್ಲ ಸಮಾಜದ ಬಂಧನಕ್ಕೆ ಒಳಗಾಗುವ ಪ್ರಸಂಗಗಳು ಬಂದೇ ಬರುತ್ತಿದ್ದವು. ಹೇಗೋ ಪಾರಾಗಿ ಬಂದೆ ......

ಒಂದು ಸಣ್ಣ ಹಳ್ಳಿಯೊಂದರ ಹೊರಗಿರುವ ಗುಡಿಯಲ್ಲಿ ರಾತ್ರಿ ಹೋಗಿ ಬೀಡು ಬಿಟ್ಟೆ-ನಾನು ಅಲ್ಲಿಗೆ ಬಂದುದು ಯಾರಿಗೂ ಗೊತ್ತಿರಲಲ್ಲ. ಗೋತ್ತಾಗಿದ್ದರೆ ಏನೋ ...... ಎಂತೊ......

ಆ ಗುಡಿ ಆಂಜನೇಯನದು. ಅಖಂಡ ಬ್ರಹ್ಮಚಾರಿ ವಾಯುಸುತನ ಆಶ್ರಯ ! ಗರ್ಭ ಗುಡಿಯ ಬಲಪಕ್ಕದಲ್ಲಿ ಕಾಲು ಮುದುಡಿಕೊಂಡು ಮಲಗಿದೆ. ಮನಸ್ಸು ಕಲ್ಪನಾ ಸಾಗರದಲ್ಲಿ ತೇಲಿ ಮುಳುಗುತ್ತಿದ್ದಿತು. ಕಣ್ಣು ಕಡಿದರೂ ನಿದ್ದೆ ಬರಲಿಲ್ಲ. ಆಗಲೇ ಹನ್ನೆರಡಾಗಿರಬಹುದು. ಸೃಷ್ಟಿ ತಾಯಿ ಪ್ರಶಾಂತಚಿತ್ರಸ್ಥಳಾಗಿದ್ದಳು. ಕತ್ತಲೆಯು ಮಾತ್ರ ಎಲ್ಲೆಲ್ಲೂ ರುದ್ರ ತಾಂಡವವಾಡುತ್ತಿತ್ತು !

ಮುಂದೆ. ಅಲ್ಲಿ ಯಾರೂ ಇರಲಿಲ್ಲವಾದರೂ ನಾನು ಮಲಗಿದ ತಾಸು ಹೊತ್ತಿಗೆ ಯಾರೋ ಅಲ್ಲಿಗೆ ಆಗಮಿಸಿ,

" ಶಿವಶಿವಾ ......... ಭಿನ್ನರುಚಿರ್ ಲೋಕಃ...... " ಎಂದರು. ನನಗೆ ಆನಂದ ದುಃಖಗಳೆರಡೂ ಏಕಕಾಲಕ್ಕೆ ಉದ್ಭವಿಸಿದವು. ನಂತರ ಅವರು ಅರ್ಧ ಗಂಟೆ ಏನು ಮಾಡಿದರೋ ಕಾಣೆ...... ತಿರುಗಿ ಅವರ ಮುಖ ನೋಡಿದ್ದು, ಅವರು ಸೇದುತ್ತಿದ್ದ ಚಿಲುಮೆಯ ಬೆಂಕಿಯ ಬೆಳಕಿನಲ್ಲಿ!

ನೋಡಲು ಮಾತ್ರ ಸನ್ಯಾಶಿ ! 'ಕಾವಿಯಧಾರಿಗಳು.' ಹುಲುಸಾಗಿ ಬೆಳೆದ ಗಡ್ಡ ಮೀಸೆಗಳು; ಮೈಗೆಲ್ಲಾ ಬೂದಿ ಬಳೆದಿದ್ದಾರೆ !

ಕೂತವರು ಮೇಲೆದ್ದು ಬಂದರು. ಅದೇಕೋ ಕಡ್ಡಿ ಕೊರೆದಾಗ ನನ್ನನ್ನು ನೋಡಿ ಬೆಚ್ಚಿದರು. ಮತ್ತೊಂದು ಕಡ್ಡಿಯನ್ನು ಕೊರೆದು ನನ್ನನ್ನೇ ನೆಟ್ಟ ದಿಟ್ಟಿಯಿಂದ ನೋಡಿ ಪ್ರಶ್ನಿಸಿದರು

" ನೀನಾರಮ್ಮಾ ...... ? "

" ನಾನೋರ್ವ ನಿರಾಶ್ರಿತೆ ! ಯಾಕೆ ತಂದೆ ? "

" ಯಾಕೂ ಇಲ್ಲ. ನೋಡಲು ತರುಣಿ ಯಾಗಿದ್ದಿ. ಮನ ಸೆಳೆಯುವ ನೋಟವಿತ್ತು ನೋಡಿದೆ.

ಆ ಸನ್ಯಾಶಿಯ ಮಾತು ಕೇಳಿ ಅಂಜಿಕೆಬಂತುಧೈರ್ಯ ತಂದು ಕೊಂಡು ಉಸುರಿದೆ.

" ನನ್ನನ್ನು ವರ್ಣಿಸಲು ನಿಮಗೆ ಹೇಳಲಿಲ್ಲ. "

" ಹೇಳುವ ಮಾತಲ್ಲಅದು. ಸ್ತ್ರೀ ಸೌಂದರ್ಯದ ಶಕ್ತಿಯ ಮುಂದೆ ಅದೆಂಥ ಮಹಾ ಮಹಾ ಮೇಧಾವಿಗಳೂ ಮುಗ್ಗರಿಸುತ್ತಾರೆ...... "

" ಅದು ನಿಮ್ಮ ತಪ್ಪು ತಿಳುವಳಿಕೆ. ಮಾನವರೆಲ್ಲಗೂ ಮಾನವ್ಯತೆ ಇರದಿರುವುದಿಲ್ಲ. ......."

" ಇರಲಿ, ನಿನಗೆ ಯಾರೂ ಇಲ್ಲವೇ ?"

" ಇದ್ದಾರೆ. ಶೀಲ, ಸತ್ಯ, ಧರ್ಮ, ನ್ಯಾಯ ಇತ್ಯಾದಿ ಆ ಜನ್ಮ ಬಂಧುಗಳಿದ್ದಾರೆ .. ....... "

" ಅಬ್ಬಾ! ಅದೆಲ್ಲಾ ಬರಡು ಬುದ್ಧಿ. ನೀನಿಲ್ಲಿಗೇಕೆ ಬಂದೆ ?

" ನಿಮ್ಮಂತೆಯೇ ಬಂದೆ. "

" ನಾನೋರ್ವ ಸನ್ಯಾಸಿ! "

" ಸನ್ಯಾಸಿಯೇ ? ಆಗಿರಬಹುದು ........ " ಎಂದು ಸುಮ್ಮನಾಗಿ ಸೆರಗು ಸರಿ ಪಡಿಸಿಕೊಂಡು, ಕಾಲು ಮುಗುಚಿದೆ. ಆಗ ಸನ್ಯಾಸಿ ನನ್ನ ಎದೆಯ ಮೇಲೆ ಕೈಯನ್ನಿಟ್ಟಿದ್ದನು. ನಾನಾಗ ಜೀವವಿದ್ದೂ ಇಲ್ಲದ ವಳಂತಾಗಿದ್ದೆ. !

" ಅಯ್ಯೋ ಮುಂದೇನಾಯಿತು. ತಾಯೀ ! "

" ನಾನು ಹೊಲತಿ ತಂದೇ ಮುಟ್ಟಬೇಡಿ. " ಎಂದು ಅಂಗಲಾಚಿ ಬೇಡಿಕೊಂಡೆ ...... .. ಆದರೇನು ಅವನ ತೋಳ ತೆಕ್ಕೆಯಲ್ಲಿ ನಾನು ಕರಗಿ ಹೋದೆ ..... .... ಕಾಮ ತೃಷೆ ತೀರಿಸಿಕೊಂಡ ಆ ಸನ್ಯಾಸಿ ಮತ್ತೂ ಮತ್ತೂ ಚುಂಬಿಸಿದ ...... ಅಯ್ಯೋ ! ನೆನೆಸಿಕೊಂಡರೆ ಈಗಲೂ ಭಯ ವಾಗುತ್ತದೆ.

ಆ ರಾತ್ರಿ ನನ್ನ ಹೃದಯ ಆ ಸನ್ಯಾಸಿಗೆ ಅರ್ಪಿತವಾಯಿತು. ಅದು ಹೇಗೋ ನಾನರಿಯೆ ? ದೈವದಾಟವೆನ್ನುವುದೇ ವಾಸಿ.

ಮುಂದೆ ಆ ರಾತ್ರಿ ಆ ಜನ್ಮ ಬ್ರಹ್ಮಚಾರಿ ಆಂಜನೇಯನ ಸಾಕ್ಷಿಯಾಗಿ ಶಪಥ ಮಾಡಿದೆ. ಆ ಸನ್ಯಾಸಿಯೇ ನನ್ನ ಗಂಡನೆಂದು. ಬೆಳಗಾಗುವುದ ರೊಳಗಾಗಿಯೇ ಆ ನನ್ನ ಗಂಡ ಎಲ್ಲಿಯೋ ಮರೆಯಾಗಿದ್ದನು ! ಈ ಅಪಾರ ಸೃಷ್ಟಿಯಲ್ಲಿ ಅವನೆಲ್ಲಿ ಅಡಗಿದನೋ ಆ ಆಂಜನೇಯನೇಬಲ್ಲ ಬೆಳಗಾಯಿತು !

ಅಂಥ ಎಷ್ಟೋ ಬೆಳಗು ಬೈಗುಗಳು ಸಂದಿಸಿ! ಹೋದವೋ ಆದರೆ... ಅವನು ಎಲ್ಲಿಯೂ ಇಲ್ಲ. ಸನ್ಯಾಶಿ, ಅಲ್ಲ. ಗಂಡನ ಮುಖ ನೋಡಲಿಲ್ಲ. ಗಿಡ ಗಿಡ, ಕಾಡು ಕಾಡು ಹುಡುಕಿದೆ. ಅವನಿಗಾಗಿ ಕಣ್ಣೀರಿನೆಡೆ ಇಟ್ಟು ಆರಾಧಿಸಿದ.

ಊರು ...... ಊರು ಕೇರಿ ಎಲ್ಲಲ್ಲಿಯೂ, ಹುಚ್ಚಿಯಂತೆ ಹುಡುಕಿದೆ. ಕೂಸಿನಂತೆ ಕಿರುಚಿದೆ. ತಾಯಿಯಂತೆ ಹಂಬಲಿಸಿದೆ.

" ನರಿ. ಈಗೆಲ್ಲಿರಬಹುದಮ್ಮ ಆ ನಿನ್ನ ಗಂಡ. ? ...... "

" ಏನೋ ಬಲ್ಲವರಾರು ? ಸಾಕು. ಇನ್ನು ನೀವು ಮರೆಯಾಗಿರಿ.

ನಾನು ಆ ನನ್ನ ಸ್ವಾಮಿಯನ್ನು ಪಡೆದು ಅವನ ಪಾದಾರವಿಂದಗಳಲ್ಲಿ ಈ ದೇಹವನ್ನು ಅರ್ಪಿಸದೆಯೇ ಬಿಡುವಡಿಲ್ಲ ... ..... ಸಾಕು ನನ್ನಂಥ ದುರಂತ ಇನ್ನುಳಿವ ಸೋದರಿಯರಿಗೆ ಬರದಿರಲಿ ...... "

" ಅಯ್ಯೋ ! ನಿಲ್ಲು ತಾಯೀ ..... ಅಮ್ಮ .. . ನಿಲ್ಲು .. "

"ಸಾಧ್ಯವಿಲ್ಲ. ಅರೆಚಣವೂ ನಿಲ್ಲಲಾರೆ. ನೀವು ನನ್ನಿಂದ ಮರೆಯಾಗಿರಿ, ನೀವು ಯಾರೋ ನನಗೆ ಗೊತ್ತಿಲ್ಲ. ಬೇಡ ನನ್ನನ್ನು ಕಾಡಬೇಡಿರಿ. ನಾನು ಆ ನನ್ನ ಗಂಡನ ಪಾದಾರವಿಂದದಲ್ಲಿಯೇ ಜೀವಿಸುವೆ. ಅವನಿಗಾಗಿ, ಅವನ ದರ್ಶನಕ್ಕಾಗಿ ನನ್ನ ಪ್ರಾಣಾರ್ಪಣವಾಗಲಿ. ಬೇಡ ಮರೆಯಾಗಿರಿ... ..

ನಾನಿಲ್ಲಿ ಜೀವಿಸುವುದಾದರೆ, ರವರವ ನರಕಯಾತನೆಯನ್ನೇ ಅನುಭವಿಸಬೇಕಾಗುವದು. ಅಯ್ಯೋ! ಈ ಲೋಕದ ಕಣ್ಣಿನಲ್ಲಿ ಪ್ರಖರವಾಗಿ ಪ್ರಜ್ವಲಿಸುತ್ತಿರುವ ಕಾಮಾಗ್ನಿಯಲ್ಲಿ ನನ್ನಂಥ ಅದೆಷ್ಟು ಸೌಂದರ್ಯವತಿಯರು ದಹಿಸಿ ಹೋಗುತ್ತಿದ್ದಾರೆಯೋ ......"

ಅಯ್ಯೋ ! ನಿಲ್ಲಿರಿತಾಯೀ, ಈ ನಟ್ಟಿರುಳಲ್ಲಿ ಎಲ್ಲಿಗೆ ಹೋಗುತ್ತಿದ್ದೀರಿ ! ಅಮ್ಮಾ ...... ನಿಲ್ಲಿರಿ...... ನಿಲ್ಲಿರಿ...... ಅಯ್ಯೋ "

# ಹೊಟ್ಟೆಯ ಹೋರಾಟ

ಎಪ್ರೀಲ್ ೨೦ !

ಆ ದಿನದ ಘಟನೆ ಇನ್ನೂ ನನ್ನ ಹೃತ್ಪಟಲದ ಮೇಲೆ ಅಚ್ಚಳಿಯದೆಯೇ ಉಳಿದಿದೆ. ರುದ್ರ ಭೀಕರತೆಯು ತಾಂಡವವಾಡುತ್ತಿದೆ. ಹೊಟ್ಟೆಯ ಹೋರಾಟದ ಸಚಿತ್ರ ಸ್ವರೂಪವನ್ನೇ ನಿರೂಪಿಸುತ್ತದೆ. ಆ ಘಟನೆಯ ಹಿನ್ನೆಲೆಯಂತೂ ಚಿದ್‌ವ್ಯೋಮದಲ್ಲಿ ಮೋಡ ಪಡೆಯಂತೆ ಮುಸುಕಿ ಅಪಾರ ಕಾರ್ಗತ್ತಲೆಯ ಕಡಲನ್ನೇ ನಿರ್ಮಿಸಿದೆ.

ನಿಜ. ಜೀವನದಲ್ಲಿ ಎತ್ಲಿಲ್ಲೂ ಬೆಳಕಿಲ್ಲ. ಒಂದು ವೇಳೆ ಇದ್ದರೂ ಅದು ಕ್ಷಣಿಕ ! ಹಾಗಾದರೆ ಮಾನವ ಜೀವಿಗೆ ಸುಖ—ಶಾಂತಿಗಳಿವೆಯೇ ? ಅವನ ಹೋರಾಟಕ್ಕೆ ಕೊನೆಯುಂಟೆ ? "ಏನೋ ......... ಬಲ್ಲವರಾರು ...... ?"

ಇನ್ನೂ ಸಾವಿರಾರು ವಿಚಾರ ತರಂಗಗಳು ಉದ್ಭೂತವಾದವು. ಕಲ್ಪನಾಮಯ ಚಿತ್ರಗಳು ತಂಡೋಪ ತಂಡವಾಗಿ ದಂಡಾಳುಗಳಂತೆ ಸಾಗಿ ಬಂದವು. ಆಗಲೂ ಗಾಡಿ ಮುಂದೋಡುತ್ತಲೇ ಇತ್ತು. ನನ್ನನ್ನು ಲೆಕ್ಕಿಸಲಿಲ್ಲ !

ಪಾಪ! ಗಾಡಿ ನಿರ್ಜೀವಿಯಾಗಿದ್ದರೂ ಅದು ತನ್ನ ಗುರಿಯ ದಾರಿಯಲ್ಲಿಯೇ ಸಾಗಿತ್ತು. ನಾನು ಗಾಡಿಗಿಂತಲೂ ಬುದ್ಧಿವಂತನಾಗಿದ್ದರೂ ನನ್ನೆಲ್ಲ ಮೈ ಭಾರವನ್ನು ಅದಕ್ಕೆ ಚಲ್ಲಿ, ಜಡದೇಹಿಯಾಗಿ, ಶತದರಿದ್ರನಂತೆ ಕುಳಿತುಕೊಂಡಿದ್ದೆ. ನನ್ನ ಗುರಿಯ ಸಾಧನೆ ಮಲೆತು ನಿಂತು ಮಡುವುಗಟ್ಟಿತ್ತು, ಆದರೆ ಗಾಡಿಯ ಗುರಿಯ ಸಾಧನೆ ಪ್ರವಾಹಪ್ರದವಾಗಿ ಒಳ್ಳೆಯ ರಭಸದಿಂದ ಸಾಗಿತ್ತು.

ಸಂಜೆ ೩ ಘಂಟೆ!

ನನ್ನಂಥ ಸಾವಿರಾರು ಜನರ ಭಾರವನ್ನು ಹೊತ್ತುಕೊಂಡು ನಿಡಿದಾದ ಉಸಿರನ್ನು ಎಳೆಯುತ್ತ ಗಾಡಿ ಹರಿಹರದ ರೈಲು ನಿಲ್ದಾಣದಲ್ಲಿ ನಿಂತುಕೊಂಡಿತು ಆಗಲೂ ಹೃದಯದ್ರಾವಕ ಸ್ವರದಿಂದ ಕೂಗಿಕೊಂಡಿತು "ಕುಹೂ ...... ಕುಹೂ ......" ಎಂದು

ಜನರು ಅದನ್ನು ಲೆಕ್ಕಿಸಲಿಲ್ಲ. ಇಳಿಯುವವರು, ಇಳಿದು ಹತ್ತುವವರಿಗೆ ಅನುವು ಮಾಡಿಕೊಟ್ಟರು. ಸ್ಥಳಾಭಾವದಿಂದ ಒಬ್ಬರಿಗೊಬ್ಬರು ಬಡಿದಾಡ ತೊಡಗಿದರಲ್ಲದೆ ಗಾಡಿಯ ಅನುತಾಪವನ್ನು ಯಾರೂ ಅನುಲಕ್ಷಿಸಲಿಲ್ಲ. ಅವರವರ ಸ್ವಾರ್ಥ ಅವರವರ ಬೆನ್ನೇರಲಾಗಿತ್ತು. ಜನದಟ್ಟಣೆ ಕಡಿಮೆ ಯಾಗಲಿಲ್ಲ. ಕೆಲವರು ಮಾತ್ರ ಗಾಡಿಗೆ ಭಾರವನ್ನು ಕಡಿಮೆ ಮಾಡಲೆಂದೊ...... ತಾವು ವಿಶ್ರಾಂತಿ ಹೊಂದಲೆಂದೋ ...... ಕೆಳಗಿಳಿದು "ಇಡ್ಲಿ" ಗಾಗಿ ಓಡಿದರು.

ಕುಳಿತಲ್ಲಿಯೇ ಕಣ್ಣು ತೇಲಿಸುತ್ತ ಸುತ್ತಲೂ ನೋಡಿದೆ. ನನ್ನನ್ನು ಕಾಣುವದಕ್ಕಾಗಿ ಬರಲಿದ್ದ ಗೆಳೆಯರೊಬ್ಬರನ್ನೇ ನಿರೀಕ್ಷಿಸಿದೆ. ಕೊನೆಗೆ ಕಿಡಿಕಿ ಯಿಂದ ಹೊರಗಿಣಿಕಿದಾಗ ಹರಿಹರ ಲಿಂಗೇಶ್ವರನ ಕೃಪಾದೃಷ್ಟಿಯಿಂದ 'ನಾಲಿಗೆ ರುಚಿ' ಯ ಉದ್ದಿನ 'ವಡೆ' 'ಇಡ್ಲಿ' ನನ್ನನ್ನು ಕೈಮಾಡಿ ಕರೆದವು. ಅವುಗಳ ಮಾತನ್ನು ಉಲ್ಲಂಘಿಸುವದು

ಒಳಿತಲ್ಲವೆನ್ನುವುದರೊಳಗಾಗಿಯೇ ನಾಲಿಗೆ ಕಣ್ಣೀರು ಸುರಿಸಿತು.ಹಾಗೆಯೇ ಗಾಡಿಯಿಂದ ಕೆಳಗಿಳಿದು ಅಂಗಡಿಯ ಕಡೆ ನಡೆದೆ.

ಮುಂಗಡವಾಗಿ ಓಲೆ ಬರೆದಿದ್ದ ನನ್ನ ಗೆಳೆಯ ಕಾಣಿಸಿಕೊಳ್ಳಲಿಲ್ಲ. "ಅಯ್ಯೋ! ಬಂದಿದ್ದಾರೋ ...... ಇಲ್ಲವೋ ...... ಮುಂದೆ ಅವರು ದಾವಣಗೆರೆಗೆ ಬಂದರೆ ನನ್ನನ್ನು ಕಾಣಲು ಸಾಧ್ಯವಿಲ್ಲ. ಸುಮ್ಮನೆ ತೊಂದರೆ ......" ಎಂದು ಕೊಳ್ಳುತ್ತ ಅತ್ತಿತ್ತ ಅಲೆದಾಡಿದೆ. ಸುತ್ತಲೂ ನೋಟದ ಜಾಲವನ್ನು ಬೀಸಿದೆ

ಆದರೆ 'ನಿಮ್ಮೊಡನೆ ಮಾತನಾಡುವುದಿದೆ. ನೀವು ದಾವಣಗೆರೆಗೆ ಹೋಗುವಾಗ ಹರಿಹರದ ರೈಲು ನಿಲ್ದಾಣದಲ್ಲಿ ಕಾಣುತ್ತೇನೆ' ಎಂದು ಓಲೆ ಬರೆದ ಗೆಳೆಯು ಕಾಣಿಸಿಕೊಳ್ಳಲಿಲ್ಲ. ಅದಕ್ಕೆ ಪ್ರತಿಯಾಗಿ ಬೇರೊಂದು ದೃಶ್ಯ ನನಗಾಗಿಯೇ ಕಾದು ಕುಳಿತಿದೆ

'ಬೇವಿನ ಗಿಡದಡಿ' ನಿಂತುಕೊಂಡ ಆ ವ್ಯಕ್ತಿ ನನ್ನನ್ನೇ ನೆಟ್ಟ ದೃಷ್ಟಿಯಿಂದ ನೋಡತೊಡಗಿದ. ಅವನ ಅಕರಾಳ ವ್ಯಕ್ತಿತ್ವ ನನ್ನನ್ನು ಚಕಿತನನ್ನಾಗಿ ಮಾಡಿತು.ಏನನ್ನೋನೋಡುವಂತೆ ನಾನು ಅವನನ್ನೇ ನೋಡುತ್ತಿದ್ದೆ. ಆದರೆ ಅವನು ಮಾತ್ರ ನನ್ನನ್ನೇ ನೋಡಿ ನನ್ನೊಡನೆ ಆತ್ಮೀಯತೆಯಿಂದ ಬೆರೆತಿರುವನೋ ಏನೋ ಎನ್ನುವಂತೆ ನೋಡತೊಡಗಿದನು...... "ಯಾರೋ ಏನೋ ನನ್ನನ್ನೇ ನೋಡುತ್ತಾರೆ" ಎನ್ನುತ್ತ ಹಾಗೆಯೇ ನಿಂತುಕೊಂಡೆ. ಆ ವ್ಯಕ್ತಿ ಇನ್ನಷ್ಟು ಸನಿಹಕ್ಕೆ ಸರಿದು ಬಂದು ಸುಮ್ಮನೆ ನಿಂತುಕೊಂಡನು. ಏನನ್ನೋ ಹೇಳಬೇಕೆಂಬ ಅವನ ಮಾತುಗಳು ಕುತ್ತಿಗೆಯಲ್ಲಿ ಸಿಕ್ಕುಕೊಂಡಿವೆ. ಒಂದೆರಡು ಮಾತುಗಳು ತುಟಿಯ ಮೇಲೆ ಕುಣಿದಾಡುತ್ತವೆ. ಆಗಲೇ ನನಗೆ ಸ್ವಲ್ಪ ಕಸಿಕರ ಬಂದಿತು. ಬಹುತರವಾಗಿ "ಭಿಕ್ಷುಕನಿರಬೇಕು......... ಪಾಪ! ಎಲ್ಲರಿಗೂ ಒಂದು ಹೊತ್ತು ......" ಎಂದುಕೊಂಡು ಕಿಸೆಗೆ ಕೈ ಹಾಕಿದೆ...... ಅಷ್ಟಾಗುವುದರೊಳಗಾಗಿಯೇ ಆ ವ್ಯಕ್ತಿ ಕಂಬನಿದುಂಬಿದ ಕಣ್ಣುಗಳಿಂದ ನನ್ನನ್ನು ನೋಡಿ,

"ನಮಸ್ತೆ! ಚೆನ್ನಾಗಿದ್ದೀರಾ?" ಎಂದಿತು.

"ನಮಸ್ತೆ ! ಇ...ದ್ದೀ...ನೆ..." ಎಂದು ಹಾಗೆಯೇ ಆಶ್ಚರ್ಯದಿಂದ ಅವನನ್ನೇ ನೋಡಿದೆ ಅವನಿಗೆ ಪ್ರತಿಯಾಗಿ ನಮಸ್ಕರಿಸಿದ ಎರಡೂ ಕೈಗಳ ಬೆಸುಗೆ ಬಿಚ್ಚಲಿಲ್ಲ. ಮುಖದ ಮೇಲೆ ನಿಸ್ತೇಜ. ಕಣ್ಣುಗಳಲ್ಲಿ ಅಪಾರ ಆಶೆ ಹೊರಸೂಸುತ್ತಿದೆ. ಹುಲುಸಾಗಿ ಬೆಳೆದ ಗಡ್ಡ ಮೀಸೆಗಳು ಗಾಳಿಗೆ ಅಲುಗಾಡುತ್ತ, ಆ ವ್ಯಕ್ತಿಯು ಹೋರಾಟಮಯ ಜೀವನದ 'ಏರಿಳಿತ'ವನ್ನು ವ್ಯಕ್ತಪಡಿಸುತ್ತವೆ. ಹೃದಯದಲ್ಲಿ ಯಾವುದೋ ಒಂದು ಹಾರೈಕೆ ಅವನನ್ನು ನನ್ನ ಮುಂದೆ ಕಲ್ಲಿನ ಕಂಬದಂತೆ ಹಿಡಿದು ನಿಲ್ಲಿಸಿದೆ.

ನಾನೂ ಅವನನ್ನೇ ದಿಟ್ಟಿಸಿದೆ ಆಗ ಗುಳಿ ಬಿದ್ದ ಅವನ ಕಣ್ಣುಗಳಿಂದ ಅಶ್ರುಬಿಂದುಗಳು ಬಳಬಳನೇ ಸುರಿದವು.

"ಸರಿ ಎಲ್ಲಿಗೆ ಹೋಗಬೇಕು ?"

"ದಾವಣಗೇರಿಗೆ .. .."

"ಮತ್ತೆ ... ಬರಬೇಕೇ. ?"

"ಅದೇನಿಲ್ಲ... .. ಅಲ್ಲಿಯೇ ಇರುತ್ತೇನೆ......"

"ಏಕೆ ಧಾರವಾಡವನ್ನು ಬಿಟ್ಟು ಬಿಟ್ಟಿರಾ ?"

ನನಗೆ ಸಮೇವಾಶ್ಚರ್ಯವಾಯಿತು. "ಈ ವ್ಯಕ್ತಿ ನನಗೆ ಮೊದಲಿನಿಂದಲೂ ಪರಿಚಯವಿದ್ದಿರಬೇಕು" ಎಂದುಕೊಳ್ಳುತ್ತಲೇ ಪುನರಾವರ್ತಿಯಾಗಿ ಪ್ರಶ್ನಿಸಿದನು ......

"ಮತ್ತೆ ಈಗೇನು ಬರೆಯುತ್ತಿದ್ದೀರಿ ?"

"ಏನೂ ಇಲ್ಲ. ಹೊಟ್ಟೆಯ ಹೋರಾಟದಲ್ಲಿ ಸಾಹಿತ್ಯ ಸೇವೆ ಪ್ರವಾಹಪ್ರದವಾಗಿ ಹರಿಯುತ್ತಿಲ್ಲ. ಕಿರುಗೊಳವಾಗಿದೆ......" ಇಷ್ಟಾಗುವದರೊಳಗಾಗಿಯೇ ಆ ಪುಣ್ಯಾತ್ಮ ಯಾತ್ರಿಯ ಮಗುವು ಏನನ್ನೋ ತಿನ್ನುವಾಗ, ಹದ್ದು ಹಾರಿ ಬಂದಂತೆ ಹಾರಿ ಬಂದು ನನ್ನ ಎದುರಿಗೆ ನಿಂತಿದ್ದ ಅವನಿಗೆ,

" ಎಲ್ಲಿಗೆಹೋಗಬೇಕು. " ? ಎಂದು ಟಿಕೀಟ ಚಕ್ಕರ ಪ್ರಶ್ನಿಸಿದ. ಆ ವ್ಯಕ್ತಿಯ ಮಾತುಗಳು ಹೊರ ಬರಲಿಲ್ಲ. ತುಟಿಗಳು ಅದುರ ತೊಡಗಿದವು, ಮುಖದ ಮೇಲೆ ಮ್ಲಾನತೆ ಇದ್ದರೂ ನಸುಗೆಂಪಾಯಿತು ಮುಖ! ಆದರೂ ಹೀಗೆ ನುಡಿದ.

" ಬೆಂಗಳೂರಿಗೆ ಸರ್ "

ಆಗ ಆ ರೈಲು ಅಧಿಕಾರಿ ಈರ್ವರನ್ನು ದಿಟ್ಟಿಸಿ ನೋಡಿ ......

" ಟಿಕೇಟ್ ಎಲ್ಲಿದೆ ಕೊಡಿ. " ಅಧಿಕಾರಿ ಸುತ್ತಲೂ ನೋಟವನ್ನು ಬೀರಿದ. " ಮತ್ತೆ ಇಂಥ ನರಬಲಿಗಳು ಇನ್ನೆಷ್ಟು ಸಿಗುವವೋ ......" ಎಂದು.

ನನಗೂ ಸುಮ್ಮನಿರಲಾಗಲಿಲ್ಲ. " ಏನೋ ಕಷ್ಟ ಬಂದಿರಬೇಕು...... ಪಾಪ ! ಇರಲಿ. ವಿಚಾರಿಸುವಾ ...... " ಆಗಲೇ ಆವ್ಯಕ್ತಿ ತನ್ನ ಜೀವನ ಚರಿತ್ರೆಯ ಸಂಕ್ಷಿಪ್ತ ರೂಪ ರೇಷೆಗಳನ್ನು ವಿಶದೀಕರಿಸಿದನು ಆ ವ್ಯಕ್ತಿಯ ಮಾತುಗಳನ್ನು ಕೇಳಿ ರೈಲು ಅಧಿಕಾರಿ " ಅಯ್ಯೋ ! ಎಲ್ಲೆಲ್ಲೂ ಇದೇ ಇದೆ. ದಿನಾಲು ಇಂಥ ಸಾವಿರಾರು ಕಥೆಗಳನ್ನು ಕೇಳುತ್ತಿದ್ದೇನೆ ಪಾಪ ! ನೀವಿಷ್ಟು Educated ಆಗಿದ್ದರೂ ಹೊಟ್ಟೆಗೆ ಹಿಟ್ಟಿಲ್ಲ ......ಆಗಲಿ ...... ನೀವು ಎಲ್ಲಿಂದ ಬಂದಿರಿ... ? ...

" ಬೆಳಗಾವಿಯಿಂದ ...... "

" ಸರಿ. ನಿಮ್ಮ ಹೆಸರು ... " ? ... ರೈಲು ಅಧಿಕಾರಿ ಪ್ರಶ್ನಿಸಿದ.

" ನನ್ನ ಹೆಸರು ಶ್ರೀನಿವಾಸ ...... "

ನನಗೆ ಆಗಲೇ ಸ್ಮೃತಿ ಸುಳಿಯು ತೊಡಗಿತು

" ಶ್ರೀನಿವಾಸ " ಎಂದೊಡನೆಯೇ ನನಗೆ ಹಿಂದಣ ಜೀವನದ ಅರಿವಾಯಿತು.

" ಸರಿ ಸಾಹೇಬರೇ ಇವರು ನನ್ನ ಗೆಳೆಯರು ದಯಮಾಡಿ ಇವರನ್ನು ಕ್ಷಮಿಸಿರಿ...... "

" ಆಗಲಿ ಜೀವನವೇ ಕಷ್ಟವಾಗಿದೆ. ಇರಲಿ ನೀವು ಬಂದದ್ದು ಎಲ್ಲಿಂದ ? "

" ಬೆಳಗಾವಿಯಿಂದ ಎಂದು ಹೇಳಿದೆನಲ್ಲಾ ......"

" ಅಲ್ಲಿಂದಲೂ ಟಿಕೇಟು ಇಲ್ಲವೇನು? "

" ಇತ್ತು. ಬೆಳಗಾವಿಯಿಂದ ಧಾರವಾಡದ ವರೆಗೆ ಮಾತ್ರ ......... ಅಷ್ಟು ಮಾತ್ರ ಹಣವಿತ್ತು ......... " ಶ್ರೀನಿವಾಸ ಭೋರೆಂದು ರೋದಿಸತೊಡಗಿದ.

" ಕೊನೆಯ ಪಕ್ಷ ಬೆಂಗಳೂರಿನ ವರೆಗಾದರೂ ರೈಲು ಚಾರ್ಜನ್ನಾದರೂ ತರಬೇಕಿತ್ತು ...... "

" ಇಲ್ಲ. ಮಂಗಲಸೂತ್ರದ ಬೆಲೆ ಕೇವಲ ೫ ರೂಪಾಯಿ ಆಯಿತು ...... ದಯವಮಾಡಿ ಕ್ಷಮಿಸಿರಿ . "

" ಮಂಗಲ ಸೂತ್ರದ ಬೆಲೆ " ಎನ್ನುತ್ತಲೇ ಕಣ್ಣೀರು ಬಳ ಬಳನೇ ಸುರಿದವು. ರೈಲು ಅಧಿಕಾರಿ ಬಲವಾಗಿ ಉಸಿರೆಳೆದು " ಅಯ್ಯೋ ಜೀವನವೆಲ್ಲ ದುಃಖಮಯವಾಗಿದೆ. " ಎನ್ನುತ್ತ " ಸರಿ. ಚಿಂತಿಸಬೇಡಿ " ಎಂದು ಹಾಗೆಯೇ ಹಿಂದುರುಗಿ ಹೋದನು ...... ಆಗಲೇ ಶ್ರೀನಿವಾಸನು ತಾಯಿಯನ್ನಪ್ಪಿ ಕಿರುಚುವ ಕೂಸಿನಂತೆ ತಲೆಯನ್ನು ನನ್ನ ಎದೆಗೆ ಹಚ್ಚಿ ಬಿಕ್ಕಳಿಸತೊಡಗಿದನು.

x x x x

ಶ್ರೀನಿವಾಸ ನನ್ನ ಆತ್ಮೀಯ ಗೆಳೆಯ. ಈರ್ವರೂ ಒಂದೇ ಶಾಲೆಯ ವಿದ್ಯಾರ್ಥಿಗಳು. ಆದರೇನು ? ನಾನು ಸಪ್ತಾಪುರದ ಪ್ರಶಾಂತ ವಾತಾವರಣದ ರಮಣೀಯ ಸನ್ನಿವೇಶದಲ್ಲಿ ವಾಸಿಸುತ್ತಿದ್ದೆ ಅಲ್ಲಿ ಬೀಸುವ ಕವಿಗಾಳಿಗೆ ಮೈಯೊಡ್ಡಿ ನಲಿದಾಡುತ್ತಿದ್ದೆ. ಸೃಷ್ಟಿ ದೇವತೆಯು ಪ್ರಸನ್ನಳಾಗುವ ಸಂಜೆಯ ಸೌಂದರ್ಯದಲ್ಲಿ ದಿಬ್ಬದ ಮೇಲೆ ಕುಳಿತು, ಮನಸ್ಸಿನ ಮಲಿನತೆಯನ್ನು ತೊಳೆದುಕೊಳ್ಳುತ್ತಿದ್ದೆ. ಆದರೆ ಶ್ರೀನಿವಾಸ ಹಾಗಲ್ಲ 'ಬೋರ್ಡಿಂಗ' ಒಂದರಲ್ಲಿ ' ಅರೆಗೂಳು ' ತಿಂದು ಬಡತನದ ಬೇನೆಯಿಂದ ಬಳಲುತ್ತಿದ್ದ ಆದರೂ ಅವನು ಒಂದೊಂದು ದಿನ ಸಪ್ತಾಪುರದ ಸೌಂದರ್ಯದಲ್ಲಿ ಬೆರೆತು ನನ್ನಂತೆಯೇ ಬಡತನವನ್ನು ಮರೆಯುತ್ತಿದ್ದ. ಹೀಗೆಯೇ ನಮ್ಮ ಜೀವನ ಮೂರು ನಾಲ್ಕು ವರ್ಷ ಸಾಗಿತ್ತು.

ಶ್ರೀನಿವಾಸನು ಸರಳ ಸ್ವಭಾವದವನು. ಸ್ವಭಾವತ: ಸತ್ಯವಾದಿ. ಅವನ ಗುಣಾವಗುಣಗಳು ನನ್ನಲ್ಲಿ ಆದೆಷ್ಟೇ ಮಾರ್ಪಾಡು ಮಾಡಿದ್ದವು ಯಾರಾದರೂ ಬಿರುನುಡಿಗಳನ್ನಾಡಿದರೆ ಪ್ರತಿಕೂಲವಿಲ್ಲ ! ' ತಾಳ್ಮೆ ' ಯನ್ನೇ ತೋರ್ಪಡಿಸುತ್ತಿದ್ದನು ದೇವರು ಅವನ ಪಾಲಿಗೆ ಕಡಲಿನಂಥ ಶಾಂತಿಯನ್ನು ದಯಪಾಲಿಸಿ, ಅವನ ಪಾಲಿನ ಶ್ರೀಮಂತಿಕೆಯನ್ನೇ ಕಸಿದುಕೊಂಡಿರುವನು.

ಹೀಗಿದ್ದರೂ ಶ್ರೀನಿವಾಸನು ತನ್ನ ಮನೆತನದ ಯಾವುದೇ ಘಟನೆಯನ್ನು ವಿವರಿಸಿರಲಿಲ್ಲ. " ನಾನು ಬಡವನಿದ್ದೇನೆ " ಎಂದಿಷ್ಟೇ ಹೇಳಿದ್ದನು. "ಸರಿ. ವಿದ್ಯಾರ್ಥಿಗಳಾಗಿದ್ದ ನಮಗೆ ಹೆಚ್ಚಿನ ವಿಷಯವಾದರೂ ಏಕೆ? ಅವರ ಮನೆತನವನ್ನು ತೆಗೆದುಕೊಂಡು ನಾನೇನು ಮಾಡಲಿ? " ಎಂದು ಕೊಂಡು ಸುಮ್ಮನಾಗಿದ್ದೆ. ಯಾವಾಗಲಾದರೊಮ್ಮೆ ಊರಿನ ನೆನಪು ತಂದು ಕೊಟ್ಟರೆ ಶ್ರೀನಿವಾಸ ಕಣ್ಣೀರನ್ನೇ ಸುರಿಸುತ್ತಿದ್ದ. ಅದೇಕೊ ?

ಮುಂದೆ ಮ್ಯಾಟ್ರಿಕ್ ಪರೀಕ್ಷೆ ಮುಕ್ತಾಯವಾಗುತ್ತಲೇ ಅವನು ಧಾರವಾಡವನ್ನು ತ್ಯಜಿಸಿದ. ಅಗ ...... ಆ ದಿನ ನನಗೆ ಹೇಳಿದ ಕೊನೆಯ ಮಾತು ಇನ್ನೂ ನನ್ನ ನೆನಪಿನಲ್ಲಿದೆ.

“ ನಾನು ನೌಕರಿ ಮಾಡದೆಯೇ ಗತ್ಯಂತರವಿಲ್ಲ ......... ಆದರೂ ಶಿಕ್ಷಣ ಸಾಗಿಸುತ್ತೇನೆ......... ಏನೋ ......... ನೋಡಬೇಕು ದೇವ ನಿದ್ದಾನೆ. ”

ಸರಿ ಮುಂದೆ ಶ್ರೀನಿವಾಸ ಬೆಳಗಾಂವಿ ಸೇರಿದನು, ನಾನು ಧಾರವಾಡ ದಲ್ಲಿಯೇ ಬೀಡು ಬಿಟ್ಟೆ ! ತದನಂತರ ಅವನ ಸಂಪರ್ಕವೇ ಕಡಿದಂತಾ ಯಿತು. ಹೀಗೆಯೇ ನಾಲ್ಕಾರು ವರ್ಷ ನನ್ನ ಪಾಲಿಗೆ ಶ್ರೀನಿವಾಸ ಮರೆತು ಹೋದನು. ಆದರೂ ಆಗಾಗ ಅವನ ನೆನಹು ಸುಳಿದಾಡದೆಯೇ ಇರುತ್ತಿ ರಲಿಲ್ಲ !

ಎಪ್ರೀಲ್ ೨೦ !

ಶ್ರೀನಿವಾಸನನ್ನು ಅಂದೇ ಕಂಡದ್ದು. ಅದೆಷ್ಟೋ ಸಮಯ ಅಪರಿಚಿತ ರಾಗಿ ನಿಂತು ಕೊಂಡೆವು ಕೊನೆಗೆ ಆತ್ಮೀಯತೆಯ ಬಂಧನದಲ್ಲಿ ಬಂಧಿತ ರಾದೆವು.

ಮತ್ತೆ ಗಾಡಿ ಮುಂದುವರೆಯಿತು. ಮೈಭಾರದಿಂದ ಸಾಗುವ ಆನೆ ಯಂತೆ ಮೊದಲು ಸಾವಕಾಶವಾಗಿ ಸಾಗಿತು. ಮುಂದೆ ಬೇಟೆಯನ್ನು ಕಂಡು ಬೇಡನು ಬತ್ತಳಿಕೆಯಿಂದ ಬಿಟ್ಟ ಬಾಣದಂತೆ ಗಾಡಿ ಸಾಗಿತು.

ಗಾಡಿಸಾಗಿದಂತೆಲ್ಲ ಶ್ರೀನಿವಾಸನು ತನ್ನ ಜೀವನ ಚಿತ್ರವನ್ನು ಆಮೂ ಲಾಗ್ರವಾಗಿ ವಿವರಿಸ ತೊಡಗಿದನು ಅವನು ಹೇಳುತ್ತಿದ್ದಂತೆಲ್ಲಾ ನನ್ನ ಕಣ್ಣು ಮುಂದೆ ಅವನ ಜೀವನವೆಲ್ಲಾ ಸಿನೇಮಾ ಮಂದಿರದಲ್ಲಿಯ ರಜತ ಪರದೆಯ ಮೇಲೆ ತೇಲುವಸನ್ನಿವೇಶಗಳಂತೆ ಸುಳಿಯುತ್ತಿದ್ದವು. ನಡು ನಡುವೆ ಬಿಸಿಯುಸಿರುಗಳು ಎದೆಭಾರವನ್ನು ಹಿಂಗಿಸುತ್ತಿದ್ದವು ಅದೇಕೋ ಹೊರಗೆ ಇಣಿಕಿದಾಗ ನಾವು ಮುಂದುವರಿಯುವಂತೆಯೂ ಜಗತ್ತು ಹಿಂದೆ ಉಳಿಯು ವಂತೆಯೂ ಭಾಸವಾಗುತ್ತಿತ್ತು. ಮತ್ತೊಮ್ಮೆ ಕಣ್ಣು ಮುಚ್ಚಿಕೊಂಡಾಗ **ನಾವು ಈ ಅನಂತ ವಿಶ್ವದ ಯಾವುದೋ ಒಂದು ಮೂಲೆಯಲ್ಲಿ**

ಪರಮಾಣುಗಳಾಗಿಬಿದ್ದಿದ್ದೆವು ಆಗಲೂ ಗಾಡಿಸಾಗುತ್ತಲೇ ಇತ್ತು; ಶ್ರೀನಿವಾಸನು ಜೀವನ ಚಿತ್ರವನ್ನು ಚಿತ್ರಿಸುತ್ತಲೇ ಇದ್ದನು. ಆಗ ಅವನ ಕಣ್ಣೀರುಗಳು ಅವನಿಗೆ ಸಹಾನುಭೂತಿಯನ್ನು ವ್ಯಕ್ತಗೊಳಿಸುವಂತೆ ಸುರಿಯುತ್ತಿದ್ದವು.

ಆಗಲೇ ಅವನ ದಾರುಣ ಕಥೆ ಮುಕ್ತಾಯದಲ್ಲಿತ್ತು. ದಾವಣಗೆರೆಯು ನಿಲ್ದಾಣವೂ ಕಂಗೊಳಿಸಿತು. ಶ್ರೀನಿವಾಸ ಅಂತೂ ಕಥೆಯನ್ನು ಮುಗಿಸಿದ. ಗಾಡಿ ನಿಲ್ದಾಣದಲ್ಲಿ ನಿಂತಿದ್ದಿತು ...... ಆಗಲೂ ಬಲವಾಗಿ ಕೂಗಿಕೊಂಡಿತು......

“ ಕುಹೂ ....... ಕುಹೂ ......” ಎಂದು ಗಾಡಿ ತನ್ನ ಭಾರವನ್ನು ತಾಳಲಾರದೆಯೇ ಕೂಡಿಕೊಂಗಿತಾದರೂ “ ಅದು ನಮ್ಮನ್ನೇ ಕರೆಯುತ್ತದೆ ” ಎಂದು ಪ್ರವಾಸಿಕರು ಊರೊಳಗಿಂದ ಓಡಿ ಬರುತ್ತಿದ್ದರು...

ನಾನೆಷ್ಟು ಬಲವಂತ ಪಡಿಸಿದರೂ ಶ್ರೀನಿವಾಸ ನಿಲ್ಲಲಿಲ್ಲ. ಬೆಂಗಳೂರಿಗೆ ಪ್ರಯಾಣ ಬೆಳೆಸಿದ. ಆದರೇನು ಕೊನೆಗೆ ಕಣ್ಣೀರಿನಿಂದ ಈ ಮಾತು ಪವಣಿಸಿದ.

“ ಜೀವಂತವಿದ್ದರೆ ಖಂಡಿತವಾಗಿಯೂ ನಿಮ್ಮನ್ನು ಕಾಣುತ್ತೇನೆ ”

( ೨ )

ಶ್ರೀನಿವಾಸನು ನನ್ನಿಂದ ಮರೆಯಾಗಿದ್ದರೂ. ಅವನೇ ನನ್ನೆದುರು ಕುಳಿತುಕೊಂಡು ಕಥೆ ಹೇಳಿದಂತಾಗುತ್ತದೆ. ಗಾಡಿ ಸಾಗಿದಂತಾಗುತ್ತದೆ. “ ............ ನನಗೆ ತಂದೆ ತಾಯಿಗಳಿಲ್ಲ. ನಾನು ೧೦ ವರ್ಷದವನಿರುವಾಗಲೇ, ತೀರಿಕೊಂಡು ಹೋಗಿದ್ದಾರೆ. ಸದ್ಯದಲ್ಲಿ ನನ್ನ ಮಲತಾಯಿ ಇದ್ದಾಳೆ. ಹಾಗೂ ನನ್ನ ಹೆಂಡಿತಿ ಇದ್ದಳು ......... ”

“ ಹೆಂಡತಿ ! ಇದ್ದಳು ! (?) ”

" ಹಾ ! ನನ್ನ ಮದುವೆಯಾಗಿತ್ತು. ೧೨ ವರ್ಷದವನಿರುವಾಗಲೇ ನನ್ನ ಅಕ್ಕನ ಮಗಳು ಸುಶೀಲೆಯೊಡನೆ ನನ್ನ ಮದುವೆಯಾಗಿ ಹೋಗಿತ್ತು. ನಮ್ಮ ವಂಶ ನಾಶವಾಗಬಾರದೆಂದು ನನ್ನ ಅಕ್ಕ ಸಾಯುವುನ್ನಾದಿನ ತನ್ನ ಮಗಳೊಂದಿಗೆ ನನ್ನ ಮದುವೆ ಮಾಡಿ ಮುಗಿಸಿದ್ದಳು. ಇದ್ದ ಒಬ್ಬ ಅಕ್ಕನೂ ತನ್ನ ಮಗಳನ್ನು ನನ್ನ ಪಾಲಿಗೆ ಕೊಟ್ಟು ಕಣ್ಮರೆಯಾದಳು...... ಅಯ್ಯೋ ! .........

" ಇರಲಿ ಮುಂದೇನಾಯಿತು...... ? "

" ......... ಮುಂದೆ ತಾಯಿ ತೀರಿ ಹೋದನಂತರ ನನ್ನ ತಂದೆಯ ಮದುವೆಯಾಯಿತು. ಆವಳೇ ಈಗಿನ ಮನೆಯ ಸರ್ವಾಧಿಕಾರಿ !

" ನನ್ನ ಹೆಂಡತಿ ಸುಶೀಲೆ ನನ್ನ ಮಲತಾಯಿಯ ಮಡಿಲಲ್ಲಿಯೇ ಬೆಳೆದಳು. ಹೇಗೋ ದೊಡ್ಡವಳಾದಳು .......... ನಾನಾದರೂ ಹಾಗೆಯೇ ಬೆಳೆದೆ. ಸುಖವನ್ನು ಕನಸಿನಲ್ಲಿಯೂ ಕಾಣದಂತೆ ಬೆಳೆದೆ. ಕಾಟವನ್ನು ಕೊಟ್ಟರೂ ಹೇಗೋ ನುಂಗಿಕೊಂಡೆ .......... ಹಾಗೂ ಹೀಗೂ ಜೀವನವನ್ನು ಸಾಗಿಸಿದೆ. ಮಲತಾಯಿ ಕೂಲಿ ಮಾಡೆಂದಳು. ನಾನು ಶಾಲೆಗೆ ಹೋಗುತ್ತೇನೆಂದೆ ...... ಮುಂದೆ ಆವಳ ಮಾತನ್ನು ಮೀರಿ ಧಾರವಾಡಕ್ಕೆ ಬಂದಿದ್ದೆ .........

" ಓಹೋ ......ಹೀಗೋ ! ನನಗೆ ಹೇಳಲೇ ಇಲ್ಲವಲ್ಲಾ ! "

" ದಯಮಾಡಿ ಕ್ಷಮಿಸಿರಿ ಹೇಳಬಾರದೆಂದು ಬಿಟ್ಟಿದ್ದೆ "

" ಸರಿ ಮುಂದೇನಾಯಿತು ? "

" ಮುಂದೆ ನನ್ನ ಹೆಂಡತಿಯ ವಿಷಯವನ್ನೇ ಮರೆತು ಓದು ಸಾಗಿಸಿದೆ, ವಾರದಮನೆ, ಬೋರ್ಡಿಂಗುಗಳೇ ನನ್ನ ಮನೆಗಳು. ಅಲ್ಲಿಯ ಅನ್ನದಾತರೇ ತಂದೆ ತಾಯಿಗಳು ...... "

"ಸರಿ ಅದೆಲ್ಲವೂ ನನಗೆ ಗೊತ್ತಿದೆ. ಆದರೆ ನಿನ್ನ ಹೆಂಡತಿ......?"

"............ ಅವಳು ಕಣ್ಣೀರು ಕೂಳು ತಿಂದಳು ಇಷ್ಟು ಮಾತ್ರ ಗೊತ್ತು. ಆದರೆ...... ಅಲ್ಲಿ ಹೇಗಿದ್ದಳೋ ......... ಹೇಗೆ ಬೆಳೆದಳೋ ಯಾರಿಗೆ ಗೊತ್ತು? ಮಲತಾಯಿಯ ಮಡಿಲು, ಹಾಲೋ ಹಾಲಾಹಲವೋ ...ನಾ ಕಾಣೆ ......"

"ಮುಂದೇನಾಯಿತ.?"

"ಮ್ಯಾಟ್ರಿಕ್ ಮುಗಿಸಿಕೊಂಡು ಮನೆ ಸೇರಿದೆ.

ಆಗಲೇ ನಾನು ಮನೆಗೆ ಹೋಗದೆಯೇ ಆರು ವರ್ಷಗಳ ಕಾಲ ಸಂದಿಸಿತ್ತು. ನಾನು ಮನೆ ಸೇರಿದಾಗ ಮಲತಾಯಿ ಇದ್ದಿರಲಿಲ್ಲ. ನನ್ನ ಹೆಂಡತಿ ಸುಶೀಲೆ ಇದ್ದಳು. ಬಂದವಳೇ ಸಂಶಯಾಸ್ಪದವಾಗಿ ನಿಂತು ಕೊಂಡಳು. ನನ್ನ ತುಂಬಿದ ಕಂಠ

"ಯಾಕೆ ಸುಶೀ........."ಎಂದಿತು. ಸುಶೀಲೆ ಬಂದವಳೇ ನನ್ನನ್ನು ತಬ್ಬಿ ಬಲವಾಗಿ ಭೋರಿಟ್ಟಳು. ಆಗ ತಿಳಿಯಿತು ಸುಶೀಲೆಗೆ ವನ ವಾಸವಿದೆ ಎಂದು ......"

"ಅಯ್ಯೋ!"

ತಾಯಿ ನನ್ನನ್ನು ಬಲವಾಗಿ ಶಪಿಸಿದಳು. ಆರು ವರ್ಷಗಳ ಕಾಲ ಮನೆ ಬಿಟ್ಟು ಹೋಗಿದ್ದಕ್ಕಾಗಿ ಬೆಂಕಿಯ ಕಿಡಿಯನ್ನು ಸೂಸಿದಳು ...... ನವ ಕರಿ ಮಾಡುವದಾದರೆ ಮನೆಯಲ್ಲಿ ಇರು. ಇಲ್ಲವಾದರೆ ನಿನ್ನ ಹೆಂಡತಿ ಯನ್ನು ಕಟ್ಟಿಕೊಂಡು ನಡೆ ಎಲ್ಲಿಯ ವರೆಗೆ ಇವಳಿಗೆ ಕೂಳು ಹಾಕ ಬೇಕು!" ಎಂದು ಘರ್ಜಿಸಿದಳು. ಆ ದಿನ ನಾವೀರ್ವರೂ ಊಟ ಮಾಡ ಲಿಲ್ಲ. ಕಣ್ಣೀರಿನ ಕೋಡಿ ಹರಿಸಿದೆವು. ಅವಳಿಲ್ಲದ ಸಮಯದಲ್ಲಿ ಈರ್ವರೂ ಬಾಳಿನ ಬಗೆಗೆ ಚಿಂತಿಸುತ್ತಿದ್ದೆವು. ಉಕ್ಕಿ ಬರುವ ದುಃಖದಿಂದ ಬಿಗಿದಪ್ಪಿ ಕೊಳ್ಳುತ್ತಿದ್ದೆವು..."





ಹಾಗೆಯೇ ಒಂದು ವರ್ಷ ಕಾಲ ಮನೆಯಲ್ಲಿಯೇ ನರಕ ಯಾತನೆಯನ್ನು ಅನುಭವಿಸಿದೆವು.........

ತಾಯಿಗೆ ತಿಳಿಯದಂತೆ ಕಳ್ಳತನದಿಂದ ಸಂಸಾರವನ್ನು ಸಾಗಿಸಿ, ಕ್ಷಣ ಕಾಲವಾದರೂ ಸ್ವರ್ಗೀಯ ಸುಖವನ್ನೂ ಅನುಭವಿಸುತ್ತಿದ್ದೆವು.

ಆ ಸಮಯ ನಾನು ಸುಮ್ಮನೇ ಕುಳಿತುಕೊಳ್ಳಲಿಲ್ಲ. ಊರಲ್ಲಿ ಎಲ್ಲಲ್ಲೂ ತಿರುಗಾಡಿದೆ. ಕಂಡ ಕಂಡವರ ಕಾಲಿಗೆ ಬಿದ್ದೆ. ನೌಕರಿಗಾಗಿ ಯಾಚನೆಗೈದೆ. ಎಲ್ಲಲ್ಲೂ ನಿರಾಶೆ ! ನಿಟ್ಟುಸಿರುಗಳೇ !

ಮುಂದೆ ಸುಶೀಲಿ ಬಸುರಿಯಾದಳು. ಆಗಂತೂ ಬಲವಾದ ವೇದನೆಯಾಯಿತು ಮಲತಾಯಿ ಮಡಿಲಲ್ಲಿ ಬೆಳೆದ ಸುಶೀಲೆಗೆ ಎದೆ ನಡುಗಿತು. ಮುಚ್ಚು ಮರೆಯಲ್ಲಿ ನಾವು ನಡೆಸಿದ ಈ ವ್ಯವಹಾರ ತಾಯಿಗೆ ಗೊತ್ತಿರಲಿಲ್ಲ. ಗೊತ್ತಾದರೆ ಹೇಗೆ ? ಎಂದು ಯೋಚಿಸುತ್ತಿದ್ದೆವು......

“ ಸರಿ ಅಳಬೇಡಾ ಮುಂದೇನಾಯಿತು. ಏನು ಹಡೆದಳು ನಿನ್ನ ಹೆಂಡತಿ ” ?

“ ಅಯ್ಯೋ ! ಹಡೆಯುವ ಮುನ್ನವೇ ಭೂಲೋಕದಿಂದ ಜಾರಿದಳು ...... ”

“ಅಯ್ಯೋ ! ಏನಾಗಿತ್ತು ? ”

“ ಏನೂ ಇಲ್ಲ ...... ಹೀಗೆಯೇ ನಮ್ಮ ಜೀವನ ನಡೆಯಿತು. ನಾನ ನಾಡಿನ ನಾಲ್ಕೂ ನಿಟ್ಟಿಗೆ ಅರ್ಜಿಗಳನ್ನು ಹಾಕಿದೆ, ಮಾರುತ್ತರವಾಗಿ “No Vacancy ” ಎಂಬುದನ್ನೇ ಪಡೆದೆ. ನಿಜ. ನಾನಾಗ ನಿರ್ಧರಿಸಿದೆ. ಈ ಈ ಲೋಕದಲ್ಲಿಯೇ ನನಗೆ “ No Vacancy ” ನಿಲ್ಲಲು ಸ್ಥಾನವಿಲ್ಲ... ಅದನ್ನು ಬಗೆದೇ ನನ್ನವಳು ಇಲ್ಲಿಂದ ಜಾರಿದಳು.

ಈ ಘಟನೆ ಅವಳಿಗೆ ಗೊತ್ತಾಗದಿರಲಿಲ್ಲ. ನಮ್ಮೀರ್ವರ ಮೇಲೆ ಕೋಪ ತಾಳಿದಳು....... ಅವಳನ್ನು ಬಲವಾಗಿ ಬಡಿದಳು. ನನ್ನನ್ನು ಮನೆಯಿಂದ ನೂಕಿದಳು. ಮುಂದೆ ನಾಲ್ಕು ದಿನ ನಾನು ಮನೆಯ ಮುಖ ನೋಡಲಿಲ್ಲ ಆಗ ಸುಶೀಲೆ ಹೇಗಿದ್ದಳೋ ಕಾಣೆ ...— ಮತ್ತೆ ಊರನ್ನೆಲ್ಲ ತಿರುಗಾಡಿದೆ. " ನೌಕರಿ ನೌಕರಿ " ಎಂದು ಕನವರಿಸಿದೆ ....... ತದನಂತರ ನನ್ನ ಗೆಳೆಯನ ತಂದೆ ಮಾಧವರಾಯರು ... ಬೆಂಗಳೂರಿನ " ಇನ್ಸುರನ್ಸ " ಕಂಪನಿಯೊಂದರ ಮಾಲಕರಿಗೆ ಓಲೆ ಕೊಟ್ಟಿದ್ದಾರೆ. ಅದನ್ನೇ ತೆಗೆದುಕೊಂಡು ಹೊರಟೆ ......ಬೆಂಗಳೂರಿಗೆ ಹೋಗಬೇಕೆಂದರೆ ದುಡ್ಡಿಲ್ಲ. ಗೆಳೆಯರಿಂದಲೂ ದೊರೆಯಲಿಲ್ಲ ......

ಮಾರನೆಯ ದಿನ ಸ್ಟೇಶನ್ನಿನ ಬಳಿ ಮಲಗಿದವನು ಮೇಲೆದ್ದು ಹೊರಟೆ...... ಮನೆಗೆ ಹೋಗುತ್ತಲೇ ಸುಶೀಲೆ ಬಿಕ್ಕಳಿಸುತ್ತಿದ್ದಳು. ಮಲ ತಾಯಿ ರುದ್ರಾವೇಶಗೊಂಡು ಅವಳನ್ನು ಬೈಯುತ್ತಿದ್ದಳು. ನಾನೂ ಹೋಗುತ್ತಲೇ ಸುಶೀಲೆ ಮೇಲೆದ್ದು ಬಂದು, ನನ್ನನ್ನು ಬಲವಾಗಿ ಬಿಗಿದಪ್ಪಿಕೊಂಡಳು ...... ನನ್ನ ಎದೆ ಕರಗಿ ನೀರಾಯಿತು...... ಆಗಲೇ ನನ್ನ ತಾಯಿ ಬಲವಾಗಿ ಅರಚಿಕೊಂಡಳು.

" ಹೂಂ ಇಲ್ಲಿಂದ ನಡೆಯಿರಿ. ದಾರಿತಪ್ಪಿ ನಡೆಯುತ್ತಿರುವ ನಿಮ್ಮಿಂದ ನನಗೆ ಕಂಲಕ ...... "

"ಇಲ್ಲ ತಾಯೀ ಕ್ಷಮಿಸು .......... ಹೋಗುತ್ತೇನೆ ಈ ಒಳಗಾಗಿ ಹೋದಹನು ತಿರುಗಿ ಬಾರದೆಯೇ ಇದ್ದಿದ್ದರೆ ಇಷ್ಟೆಲ್ಲ ಅನಾಹುತವಾಗುತ್ತಿರಲಿಲ್ಲ ...... ಕ್ಷಮಿಸು ತಾಯೀ ಬೆಂಗಳೂರಿಗೆ ಹೋಗಿ ಬಂದು ......... ಮುಂದಿನಮಾತು.........."

" ಹೋಗು ಬೆಂಗಳೂರಿಗಾದರೂ ಹೋಗು. ಸುಡುಗಾಡಿಗಾದರೂ ಹೋಗು. ಹೂಂ ಮನೆಬಿಟ್ಟು ನಡೆ........."

ನಾವೀರ್ವರೂ ಆಗ ಸುಮ್ಮನಾದೆವು. ಅದೇಕೋ ತಾಯಿ ಒಳಗೆ ಹೋದಳು ನಾನು ಸುಶೀಲೆಯನ್ನು ಕೇಳಿದೆ.

“ ಸುಶೀ......ಬೆಂಗಳೂರಿಗೆ ಹೋಗಬೇಕಾಗಿದೆ...”

“ ಏಕೆ ನೌಕರಿ ಸಿಕ್ಕಿರುವುದೇ ? ”

“ ಏನೋ ಆಶೆಯಿದೆ. ಆದರೆ ಹೋಗಲು ಹಣವಿಲ್ಲ......”

“ ಮತ್ತೆ ಈಗೇನು ಮಾಡಬೇಕೆನ್ನುತ್ತೀರಿ ? ”

“ ಏನೂ ಇಲ್ಲ. ದುಡ್ಡು ದೊರಕಿಸುವ ದಾರಿಯನ್ನೇ ಹುಡುಕು ತ್ತಿದ್ದೇನೆ. ”

“ಇರಲಿ ನಾನಿನ್ನು ಜೀವಿಸಲಾರೆ. ಅತ್ತೆಯು ನನ್ನ ಮರ್ಯಾದೆಯನ್ನೇ ಕಳೆಯುತ್ತಿದ್ದಾಳೆ. ಮನೆಗೆ ಬಂದವರೆದುರಿನಲ್ಲಿ ಮುಚ್ಚು ಮರೆಯಲ್ಲಿ ಇವಳು ಬಸುರಿಯಾಗಿದ್ದಾಳೆ ” ಎಂದು ಹೇಳುತ್ತಾಳೆ. ನಿಮ್ಮನ್ನು ಬಲವಾಗಿ ಶಪಿಸುತ್ತಾಳೆ.......”

“ ಆಗಲಿ ಸುಶೀ......ನಾನು ಬೆಂಗಳೂರಿಗೆ ಹೋಗಿ ಬರುತ್ತೇನೆ. ಆ ಮೇಲೆ ಎಲ್ಲವೂ ಸರಿಯಾಗುತ್ತದೆ. ”

“ ಬೇಡ ನೀವು ಹೋಗಿರಿ ತಿರುಗಿ ಬರಬೇಡಿರಿ ” ಈರ್ವರೂ ಬಲವಾಗಿ ಘೋರಿಟ್ಟರು.

“ ಇರಲಿ ಅಪಾರ್ಥ ಮಾಡಿಕೊಳ್ಳಬೇಡಿರಿ. ನೀವು ಇಲ್ಲಿಗೆ ತಿರುಗಿ ಬರಬೇಡಿರಿ. ನೌಕರಿಸಿಕ್ಕರೆ ಸುಖವಾಗಿ ಕಾಲಕಳೆಯಿರಿ. ನಿಮ್ಮ ದೇಹಾರೋಗ್ಯ, ಸಕಲ ಭಾಗ್ಯದಲ್ಲಿ ಭಾಗಿಯಾಗುವ ಬಾಳಗೆಳತಿಯನ್ನು.....”

“ ಇರಲಿ ಸುಶೀ ನೀನು ಇಲ್ಲಿಯೇ ಇರು. ನಾನು ಟಿಕೇಟು ಇಲ್ಲದೆಯೇ ಗಾಡಿಯ ಪ್ರವಾಸ ಮಾಡುತ್ತೇನೆ ಹೇಗಾದರೂ ಮಾಡಿ ಬೆಂಗಳೂರಿಗೆ ಹೋಗಿ ನೌಕರಿಯ ವಿಷಯವನ್ನು ತಿಳಿದುಕೊಂಡು ಬರುತ್ತೇನೆ.....”

“ ಬೇಡ ಪ್ರಾಣಹೋದರೂ ಚಿಂತೆಯಿಲ್ಲ. ಮರ್ಯಾದೆ ಕಳೆದು ಕೊಳ್ಳಬೇಡಿರಿ ...... ಇಗೋ.........” ಎನ್ನುತ್ತ ಮಂಗಲಸೂತ್ರವನ್ನು ಮುಂದೊಡ್ಡಿದಳು. ಅಷ್ಟರಲ್ಲಿ ಮಲತಾಯಿಯ ಕಾಲು ಸಪ್ಪಳವಾಯಿತು. ಮತ್ತೆ ಇದಕ್ಕೂ ವಿಘ್ನಬಂದೀತೆಂದು ಭಾವಿಸಿ, ಮಂಗಲಸೂತ್ರವನ್ನು ಕಸಿದುಕೊಂಡವನೇ ಓಡಿ ಹೊರಗೆ ಬಂದೆ. ಸುಶೀಲೆ ನಿಂತಲ್ಲಿಂದಲೇ ನೆಲಕ್ಕೆ ಬಿದ್ದಳು......ಮುಂದೆ ಐದು ನಿಮಿಷದಲ್ಲಿಯೇ ಅವಳ ಪ್ರಾಣ ಪಕ್ಷಿ ಗಗನಾಂಗಣದಲ್ಲಿ ಹಾರಿತು.......ಎಲ್ಲಿಯೋ ಮೋಡಪಡೆಯ ಮರೆಗೆ ಹಾರಿ ಹೋಯಿತು............

“ ಅಯ್ಯೋ ! ನಾನಿನ್ನೂ ಬೆಳಗಾಂವಿಯ ರೈಲು ನಿಲ್ದಾಣ ಸೇರಿ ರಲಿಲ್ಲ ಸುಶೀಲೆಯ ಮರಣದವಾರ್ತೆ ಮುಟ್ಟಿತು. ಆದರೂ ನಾನು ಹಿಂದಿರುಗಲಿಲ್ಲ. ಅವಳು ಹೇಳಿದ ಮಾತು ನನ್ನನ್ನು ಅಲ್ಲಿಗೆ ಹೋಗ ಗೊಡಲಿಲ್ಲ.

**“ನೀವು ಇಲ್ಲಿಗೆ ತಿರುಗಿ ಬರಬೇಡಿರಿ”** ಆಕೆ ಹೇಳಿದ ಈ ಮಾತು ನನ್ನನ್ನು ಹಿಡಿದು ನಿಲ್ಲಿಸಿತು..........

ಆತಲೇ ನಾನು ಮಂಗಲಸೂತ್ರವನ್ನು ಮಾರಿ ೫ ರೂಪಾಯಿ ದೊರಕಿಸಿಕೊಂಡು ಧಾರವಾಡಕ್ಕೆ ಟಕೇಟು ತೆಗಿಸಿದ್ದೆ. ಆಗ ನನಗೆ ಯಾವ ಅರಿವೂ ಇರಲಿಲ್ಲ. ಹುಚ್ಚನಂತೆ ನಿಂತುಕೊಂಡಿದ್ದೆ. ಕಣ್ಣಿಗೆ ಕತ್ತಲೆ ಗವಿಯಿತು......ನಾನು ಎಲ್ಲಿ ನಿಂತಿರುವೆನೆಂಬ ಅರಿವಾಗಲಿಲ್ಲ. ಒಮ್ಮೆ ನನಗೆ ನಾನೇ ಅರಿಯದಂತೆ ಕೂಗಿಕೊಂಡೆ “ ಸುಶೀ... ಸುಶೀ ’ ಎಂದು.

ಹೇಗೆ ಗಾಡಿಯಲ್ಲಿ ಕುಳಿತೆನೋ ನಾನರಿಯೆ! ............ಆಗಲಿ ಬೆಂಗಳೂರಿಗೆ ಹೋಗುತ್ತೇನೆ ನನ್ನವಳು ನನಗೆ ಆಣತಿಯನ್ನಿತ್ತಿದ್ದಾಳೆ. ‘ ನೀವು ತಿರುಗಿ ಇಲ್ಲಿಗೆ ಬರಬೇಡಿರಿ......” ಎಂದು

X X X X

ಶ್ರೀನಿವಾಸ ಹೇಳಿದ ಈ ಕತೆ ನನ್ನ ಚಿದ್ವ್ಯೋಮದ ಧ್ರುವತಾರೆ ಪಾಪ! ಅವನ ಜೀವನದಲ್ಲಿ ಘಟಿಸಿರುವ ಈ ಕತೆಯ ಜೀವಾಳವೇ ಹೊಟ್ಟೆಯ ಹೋರಾಟ! ನಿಜ. ಹೊಟ್ಟೆಯ ಹೋರಾಟದಲ್ಲಿ ನಿತ್ಯವೂ ಇಂಥ ದುರಂತ ಸನ್ನಿವೇಶಗಳು ಅದೆಷ್ಟು ಜರುಗುತ್ತಿವೆಯೊ............

ದಾವಣಗೆರೆ ಜೂನ ೧೦—೧೯೫೩




## ಕಸವೆಲ್ಲ ರಸ!

ಮನಸ್ಸು ಪಾದರಸದ ಪಾತ್ರೆಯಾಯಿತು. ದೇಹದಲ್ಲಿ ಕಂಪಾನು ಕಂಪನಗಳು ಉದ್ಭೂತವಾದವು. ಏನನ್ನೋ ಚಿಂತಿಸುತ್ತ, ಯಾವುದೋ ಒಂದು ಅಗೋಚರವಾದ ಲೋಕದಲ್ಲಿ ಕಾಲಿಟ್ಟಿದ್ದೆ. ಆದರೆ ... ಮನಸ್ಸಿನಲ್ಲಿ ನಡೆದ ತುಮುಲ ಯುದ್ಧ ಘೋರವಾಗಿಯೇ ನಡೆದಿದ್ದಿತು ......

ತಾಸೆರಡು ತಾಸು ಹೇಗೋ ಜಾರಿದವು!

ದೃಷ್ಟಿ ಶೂನ್ಯನಾಗಿ ಕುಳಿತುಕೊಂಡವನು, ಬಲವಾದ ಬಿಸಿಯುಸಿರೊಂದನ್ನು ಎಳೆದಾಗಲೇ ಸ್ವಲ್ಪ ಅರಿವಾಯಿತು. ಆಗ ಕಣ್ಣೀರಿನ ತೊಟ್ಟುಗಳು ಅವಿಶ್ರಾಂತವಾಗಿ ಸುರಿಯುತ್ತಿದ್ದವು. ನಂದ ಸಂಕಷ್ಟಗಳಿಗೆ ಸಹಾನುಭೂತಿ ತೋರಿಸುತ್ತ ತೊಟ್ಟುಗಳು ಯಾವುದೋ ಒಂದು ವಿಚಿತ್ರ ಗತಿಗೆ ತಾಳಹಾಕುತ್ತಿದ್ದವು. ಆಗಲೂ ಒಂದು ಬಿಸಿಯುಸಿರು ನೇರವಾಗಿ ಹೃದಯದಿಂದಲೇ ಹೊರ ಹೊಮ್ಮಿತು.

ಮತ್ತೆ ಕಣ್ಣು ಮುಚ್ಚಿಕೊಂಡೆ. ಒಳಗಣ್ಣು ತೆರೆದು ಆತ್ಮಲೋಕದಲ್ಲಿ ವಿಹರಿಸಿದೆ ......... ಅಂತರ್ಮುಖ ಜೀವಿಯಾಗಿ, ಬಾಳಿನ ಗೋಳನು ಪೃಥಃಕರಿಸಿದೆ.

ಅನುತಾಪ ತಾಳದಷ್ಟಿ ಉಕ್ಕೇರಿತು. ಚಿಂತೆ ಜ್ವಾಲೆಯಾಗಿ ಹುಟಿ ಯಿತು. ಮನಸ್ಸು ' ಹಾಯ್ ' ಎಂದಿತು. ಹೇಗೋ ನೋವನ್ನು ನುಂಗಿ, ಹಿಂದಣ ಜೀವನವನ್ನು ನೆನಹಿನ ಪರದೆಯ ಮೇಲೆ ಮೂಡಿಸಿಕೊಂಡೆ.

ನನ್ನಾಕೆ ನಿಜಕ್ಕೂ ಒಂದು ಬಂಡೆಗಲ್ಲು. ಅವಳ ಹೃದಯವಾದರೂ ಅಷ್ಟು ಕಟುವಾಗಿಯೇ ಇದ್ದಿತು; ವಿನಯ ಶೀಲತೆಯಂತೂ ಕನಸಿನ ಮಾತು. ವಿಧೇಯತೆಗೆ ಅವಳಲ್ಲಿ ಅವಕಾಶವಿರಲಿಲ್ಲ ಹೌದು. ಅವಳು ನಾರಿ ಯಲ್ಲ ಮಾರಿ ! ಮೊದ ಮೊದಲು ಅವಳೇ ನನ್ನ ಪಾಲಿನ ದೇವತೆಯಾಗಿರ ಲಿಲ್ಲವೆ ? ಇಲ್ಲವೆಂದರೆ ತಪ್ಪಾದೀತು. ನಿಜ. ನಾನು ಅವಳಿಗೆ ದೇವಿ ಎಂದು ಸಂಬೋಧಿಸುತ್ತಿದ್ದೆ. ಆದರೆ ಈಗ ....... ?

ಆದಿನ ಬೋರಗಲ್ಲಿನ ಮೇಲೆ ನೀರನೆರೆದಂತೆ ಏನನ್ನೋ ಬೋಧಿಸಿದೆ. ಪರಿಪರಿಯಾಗಿ ತಿಳಿ ಹೇಳಿದೆ ... .. ಆದರೆ ....... ಅವಳ ಹಟಮಾರಿತನ ಅವಳಲ್ಲಿಯೇ ಉಳಿಯಿತು. ಆ ಕಾರಣವಾಗಿಯೇ ನಾನೀಗ ಅಪಾರ ಯಾತನೆ ಯನ್ನು ಅನುಭವಿಸುತ್ತಲಿದ್ದೇನೆ ....

**"ನಾವು ದೇಹದ ಎರಡು ಕೈಗಳಿದ್ದಂತೆ ರಥದ ಎರಡು ಗಾಲಿಗಳಿ ದ್ದಂತೆ... ನಾಣ್ಯದ ಎರಡು ಮೈಗಳಿದ್ದಂತೆ "**...ಅಯ್ಯೋ ಇನ್ನೂ ಏನನ್ನೋ ಹೇಳಿ ನನ್ನ ಹರಕೆ ಹಾರೈಕೆಗಳನ್ನು ನಿವೇದಿಸಿಕೊಂಡೆ. ಆದರೆ, ಅದರ ಪ್ರತಿಫಲ ?...... ಎಲ್ಲವೂ ಕನಸು !......" **ದೇವೀ, ಒಡೆದ ಕಡ ಲೆಯ ಕಾಳು, ಬಿತ್ತಿದರೆ ಬೆಳೆದೀತೆ ? ಇಲ್ಲವೆ ಹುರಿದರೆ ಹುಟ್ಟೀತೆ ?** ಇನ್ನೂ ಅದೆಷ್ಟೋ ರೀತಿಯಾಗಿ ಹೇಳಿದೆ. ಆದರೆ ಅವಳು ಯಾವುದಕ್ಕೂ ಓಗೊಡಲಿಲ್ಲ. ಸತ್ಯಕ್ಕೆ ತಲೆಬಾಗಲಿಲ್ಲ. ತನ್ನದನ್ನೇ ತಾನು ಸಾಧಿಸಿದಳು ......

ನನ್ನಿಂದಲೇನಾದರೂ ಪ್ರಮಾದವಾಯಿತೇ ? ಎಂದು ಮನಸ್ಸಿಗೆ ಪ್ರಶ್ನಿಸಿಕೊಂಡೆ. ಆದಕ್ಕೆ ಉತ್ತರ ದೊರೆಯಲಿಲ್ಲ.

ಅವಳು ನನ್ನ ಪಾಲಿಗೆ ಹೃದಯಸ್ಥ ದೇವಿಯಾಗಿದ್ದರೂ ಅವಳ ಪಾಲಿಗೆ ನಾನು ಮನುಷ್ಯನೂ ಸಹಿತ ಆಗಿರಲಿಲ್ಲ. ಆದರೇನು ಸಮಾಜ ಕಟ್ಟಿದ ಕೊರಳ ಮಂಗಲ ಸೂತ್ರದ ಬಂಧನವೊಂದೇ ಅವಳನ್ನು ಬಂಧಿಸಿದ್ದಿತೇ ವಿನಃ ಇನ್ನಾವ ಮಾನವ್ಯತೆಯ ಬಂಧನಗಳೂ ಅವಳನ್ನು ಬಿಗಿದಿರಲಿಲ್ಲ. ಪಾಪ ! ಅವಳು ಹೆಣ್ಣು ! ಸ್ವಭಾವತಃ ಚಂಚಲ ಪ್ರವೃತ್ತಿಯವಳು ತನ್ನ ಹಟವನ್ನೇ ಸಾಧಿಸಿ ತಾನೂ ನರಕ ಸಮಾನವಾದ ಜೀವನ ನಡೆಯಿಸುತ್ತಿದ್ದಾಳೆ. ಆದರೇನು ಇಂದಿಗೂ ಅವಳು ನನ್ನ ದೇವಿಯೇ ಸರಿ ! ಅಯ್ಯೋ! ಅವಳ ಹೃದಯದಂತಿರಬೇಕಾದ ನಾನೇ ಅವಳ ಪಾಲಿಗೆ ಇಲ್ಲ, ತೌರಿನ ಹಂಬಲವೇ ತನ್ನ ಪಾಲಿನ ಸೊತ್ತು.

‘‘ ತಾಯಿ ! ನನ್ನ ತಾಯಿ. ಅವಳೇ ನನಗೆ ಬೇಕು. ನೀವು ಇಲ್ಲವಾದರೂ ಸರಿ ! ” ಅವಳ ಈ ಮಾತು ಅಲುಗಿನಂತೆ ನನ್ನ ಹೃದಯವನ್ನೇ ಕೊರೆಯಿತು. ಆ ಮಾತು ಕೇಳಿದಾಗ ನಾನು ಜೀವಂತ ಸುಡತ್ತಿದ್ದಂತೆ ಭಾಸವಾಯಿತು. ನಿಂತವನು ನೆಲದಮೇಲೊರಗಿ ಅದೆಷ್ಟು ಸಮಯವಾಗಿದ್ದಿತೋ ಯಾರಿಗೆ ಗೊತ್ತು ?

ಮತ್ತೆ ಜೀವನದ ಆ ಮರೆಯಲಾದ ಘಟನೆ ಮೂಡಿ ನಿಂತಿತು ! ನನ್ನಾಕೆಯೊಂದಿಗೆ ಲಗ್ನ ಮಂಟಪದಲ್ಲಿ ಕುಳಿತು ಕೊಂಡಿದ್ದೆ. ‘‘**ವಧುವರ**” **ರೆಂದು** ಜನರೇ ಆಡುತ್ತಿದ್ದರೇ ವಿನಃ ನನಗೆ ಮಾತ್ರ ಮದು ಮಗನ ಮನಸ್ಸು ಸನ್ನಿಹಿತವಾಗಿರಲಿಲ್ಲ. ಆಗುವದಾದರೂ ಹೇಗೆ ?

ಸುಮಂಗಲೆಯರು ಹಾಡು ಹೇಳುತ್ತಿದ್ದರು. ನಡು ನಡುವೆ “ ಶುಭವಾಗಲಿ ” ಎಂದು ಆರತಿ ಎತ್ತಿ ಬೆಳಗುತ್ತಿದ್ದರು. ಸನಾದಿಯ ಗದ್ದಲದಲ್ಲಿ ಹಸುಳೆಗಳು ಹಾರಾಡುತ್ತಿದ್ದವು. ಹೋಗು ಬರುವ ಜನರೂ ಉತ್ಸಾಹಪೂರಿತರಾಗಿ ನನ್ನನ್ನು ನೋಡಿ ಚೇಷ್ಟೆ ಮಾಡುತ್ತಿದ್ದರು. ಅಲಂಕೃತವಾಗಿ ನಿಂತಿದ್ದ ಲಗ್ನ ಮಂಟಪ ಅವರ್ಣನೀಯವಾಗಿದ್ದರೂ ನನ್ನ ಪಾಲಿಗೆ ಅದು ಮಸಣವಾಗಿದ್ದಿತು .......... ನನ್ನಾಕೆಗೆ ಆಗ ಯಾವ ಭಾವನೆಗಳಿದ್ದವೋ ನಾನರಿಯೆ......

ಅರ್ಥ ತಾಸಾಯಿತು !

ನನ್ನಾಕೆಯ ತಾಯಿ ನನ್ನಿಂದ ಮರೆಯಾಗಿದ್ದಳು. ಅಯ್ಯೋ ! ಅದನ್ನು ನೆನೆಸಿಕೊಂಡರೆ ಎದೆಯುರಿದಂತೆ ಭಾಸವಾಗುತ್ತದೆ ..... ನೆರೆದ ಸುಮಂಗಲೆಯರು ನನ್ನಾಕೆಯ ತಾಯಿಯನ್ನು ಕರೆದು '**ಅಳಿಯನಿಗೆ ಆರತಿ ಬೆಳಗು**' ಎಂದು ದುಂಬಾಲು ಬಿದ್ದರು. ಆಗ ಅವಳೇನೆಂದಳು ಗೊತ್ತೆ ?

"ಅಯ್ಯೋ ! ಇವನು ನನ್ನ ಅಳಿಯನಲ್ಲ. ಬೇಡ ಬೇಡವೆಂದರೂ ಇವರು [ ಗಂಡ ] ನನ್ನ ಮಗಳನ್ನು ಕೊಟ್ಟರು. ಇವನಿಗೆ ಮನೆ ಇಲ್ಲ. ದುಡ್ಡು ಇಲ್ಲ ಅಯ್ಯೋ ? ನನ್ನ ಮಗಳು ಪರದೇಶಿಯಾದಳು. ಬರಿಗೈಯ ಬೋರೇ ಗೌಡನಂತಿರುವ ಇವನಿಗೆ ಆಹುತಿ ಕೊಟ್ಟಂತಾಯಿತು ಒಡವೆಗಳಿಲ್ಲ ......... ಸರಿ, ನನ್ನ ಪಾಲಿಗೆ ನನ್ನ ಮಗಳೂ ಸತ್ತಿರುವಳೆಂದು ಭಾವಿಸುತ್ತೇನೆ. **ಇವನಿಗೆ ಆರತಿ ಬೆಳಗಲಾರೆ** ........." ಎಂದವಳೇ ಆ ಆರತಿಯನ್ನು ನೆಲದ ಮೇಲೆ ಬೀಸಾಡಿ ಛೀ, ಥೂ, ......ಎಂದಳು......ಅಂತೂ ಲಗ್ನ ಮುಗಿಯಿತು !

**ಅಂತೂ ಲಗ್ನ ಮುಗಿಯಿತು ?**

ನೀವೇ ಹೇಳಿರಿ. ತಾಯಿಯ ಈ ಮಾತಿಗೆ ನನ್ನಾಕೆ ಓಗೊಡಬೇಕೆ ? ತಾಯಿಯ ಮಾತಿಗೆ ಬೆಲೆ ಕೊಟ್ಟು ತನ್ನ ಪಾಲಿನ ದೇವರನ್ನು ಎಡಗಾಲಿನಿಂದ ಒದೆಯಬೇಕೆ ? ದಾಂಪತ್ಯ ನಾಶವಾದರೂ ಸರಿ. ನಾನು ವಿಧವೆಯಾದರೂ ಸರಿ ......... ಮಂಗಲ ಸೂತ್ರ ಹರಿದರೂ ಸರಿ ......... ನನ್ನ ತಾಯಿಯೇ ಮೇಲು ......... ಎಂದು ನನ್ನಾಕೆ ಅನ್ನಬೇಕೆ ... ? ...... ಹೇಗೋ ಅವಮಾನವನ್ನು ಸಹಿಸಿಕೊಂಡೆ. ಆದರೆ ಅವಳ ತವರು ಮನೆ ನನಗೆ ಮರೆತು ಹೋಯಿತು. ಅವಳಿಗೆ ಅದೇ ಕಠಿಕವಾಗಿ ಕಂಡಿತು. ಈ ಕಾರಣ ಕೆಲವರಿಗೆ ಸಂಕುಚಿತವಾಗಿ ಕಂಡೀತು ಆದರೆ ......... ನನಗೆ ಯಾವ ವಿಚಾರವೂ ಬರಲಿಲ್ಲ ಯಾವ ಹೆಸರಿಡಬೇಕೆಂಬ ಹವ್ಯಾಸವೂ ಉಳಿಯಲಿಲ್ಲ. ಆದರೆ ಅವರಿಂದ ಅಲಿಪ್ತನಾದೆ ...... ಮುಂದೆ ನನ್ನಾಕೆಗೂ ನನಗೂ ರಾದ್ಧಾಂತಕ್ಕೆ ಮೊದಲು ಮಾಡಿತು. ಅವಳಿಗೆ ಬೇಕೆನಿಸಿದುದೆಲ್ಲ

**ನನಗೆ ಬೇಡ. ನನಗೆ ಬೇಕೆನಿಸಿದುದೆಲ್ಲ ಅವಳಿಗೆ ಬೇಡ. ಹೀಗಾದರೆ ಹೇಗೇ? ಆಗ ಪರಿಪರಿಯಾಗಿ ಬೋಧಿಸಿದೆ. " ಬೇಡ ! ನಾನು ನೀನೆಂದರೆ ದೇಹದೆರಡು ಕೈಗಳಿದ್ದಂತೆ, ರಥವ ಎರಡು ಗಾಲಿಗಳಿದ್ದಂತೆ. ನಾಣ್ಯದ ಎರಡುಮೈಗಳಿದ್ದಂತೆ ....... ದೇವೀ ಒಡೆದ ಕಡಲೇಕಾಳು ಬಿತ್ತಿದರೆ ಬೆಳೆದೀತೆ?"**

ಅಯ್ಯೋ ! ಆ ದಿನ ಅವಳ ತಾಯಿ ಮಗಳ ಮುಖ ನೋಡಲು ಬಂದಳು. ಬಂದವಳು ಮೂರನೆಯ ದಿನ ಮಗಳೊಂದಿಗೆ ಮನೆಯನ್ನು ದಾಟಿದಳು. ಅವರನ್ನೇ ನೋಡುತ್ತ ಕುಳಿತವನು ಹಾಗೆಯೇ ಕುಳಿತುಕೊಂಡೆ. ನನ್ನಾಕೆ ತನ್ನೆಲ್ಲ ಸಾಮಾನುಗಳೊಂದಿಗೆ ತಾಯಿಯನ್ನೇ ಹಿಂಬಾಲಿಸಿದಳು. ತವರಿನ ಶೀಳಿತದಲ್ಲಿ ಸಿಕ್ಕು ನನ್ನನ್ನೇ ಮರೆತಳು.

ಮನಸ್ಸು ಸೋಲುವವರೆಗೂ ಅತ್ತು ಬಿಟ್ಟೆ !

ಕೈಗಳಿಂದ ಕಣ್ಣು ಮುಚ್ಚಿಕೊಂಡು ಕುಳಿತುಕೊಂಡೆ. ಆಗ ನನ್ನ ಸುತ್ತಲೂ ಅಸ್ಥಿ ಪಂಜರಗಳು ತಾಂಡವವಾಡುತ್ತಿದ್ದವು. ವಿಕಟ ಸ್ವರೂಪದಲ್ಲಿ ಭಯಾನಕ ಭವಿಷ್ಯತ್ತಿನ ರೂಪ ರೇಷೆಗಳನ್ನು ರದ್ರ ರಸದಿಂದ ನಿರ್ಮಿಸುತ್ತಿದ್ದವು. ನನ್ನ ಸುತ್ತಲೂ ನೆರೆದ ಆ ಅಸ್ಥಿಪಂಜರಗಳು ಅದೆಷ್ಟು ಹೊತ್ತು ತಾಂಡವವನ್ನಾಡಿದವೋ ನಾನರಿಯೆ ..... ದಿಗ್ಭ್ರಾಂತನಾಗಿ ಭಯಗ್ರಸ್ಥಚಿತ್ತನಾಗಿದ್ದೆ. ನಂತರ ನಾನೇ ಅರಿಯದಂತೆ ಬಲವಾದ ಬಿಸಿಯುಸಿರನ್ನು ಎಳೆದು ಕುಳಿತಲ್ಲಿಯೇ ಮಲಗಿಕೊಂಡೆ.

— ಮಧ್ಯರಾತ್ರಿ ! ನಾನೊಂದು ಕನಸು ಕಂಡೆ !

ಅಸಂಖ್ಯಾತ ಜನರು ನೆರೆದಿದ್ದರು. ಅಲ್ಲಿ ಅಲಂಕೃತವಾಗಿದ್ದ ವೇದಿಕೆಯನ್ನು ಅಲಂಕರಿಸಲಿದ್ದ ಆ ವ್ಯಕ್ತಿಯನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದರು ...... ಪಾಪ! ಆ ವ್ಯಕ್ತಿ ಅಲ್ಲಿಗೆ ವೇದಿಕೆಗೆ ಬರುವವರೆಗೂ ಜನರು ಅವನ ಕುಶಲ ಕಾರ್ಯವನ್ನು ವಿಮರ್ಶಿಸುತ್ತಲೇ ಇದ್ದರು. ಒಬ್ಬನು ಮಾತು ಮುಂದುವರೆಸಿದ.

—ಆವನೊಬ್ಬ ಸುಪ್ರಸಿದ್ಧ ಶಿಲ್ಪಿ· ಕುಶಲತೆಯಲ್ಲಿ ಅವನ ಕೈಹಿಡಿವ ಯೋಗ್ಯತೆ ಇನ್ನಾರಿಗೂ ಇಲ್ಲ. ನಿಜವಾಗಿಯೂ ಅವನದು ಋಷಿ ಜೀವನ. ಆವನೊಬ್ಬ ಯೋಗಿ. ತನ್ನ ಅಖಂಡ ೨೦ ವರುಷಗಳ ತಪಸ್ಸಿನಿಂದ ಅವನೊಂದು ಶಿಲ್ಪ ಕಲೆಯ ಕೌಶಲ್ಯವನ್ನು ಈ ದಿನ ಪ್ರದರ್ಶಿಸಲಿದ್ದಾನೆ......

ಇನ್ನೊಬ್ಬನೆಂದ:

—ಅಯ್ಯೋ! ಅವನದು ಮಹಾ ಕಷ್ಟಜೀವನ. ತನ್ನ ಜೀವಮಾನದಲ್ಲಿಯೇ ಅವನಿಗೆ ಸುಖವಿಲ್ಲ. ಯಾವಾಗಲೂ ಕಷ್ಟದ ಸುರಿಮಳೆ ...... ಆದರೇನು ತನ್ನ ತಪಸ್ಸಿನ ಬಲದಿಂದ ಅವನೊಂದು ಸಿದ್ಧಿ ಪಡೆದಿದ್ದಾನೆ.

ಮೂರನೆಯವನೆಂದ:

— ಕಷ್ಟ ಸಹಿಷ್ಣುತೆಯನ್ನು ಅವನಿಂದಲೇ ಕಲಿಯಬೇಕು. ಈ ಮಹಾಶಿಲ್ಪಿ ಆದರ್ಶ ಪುರುಷ. ಅವನ ಹೆಂಡತಿಯೇ ಅವನನ್ನು ಈ ಮಟ್ಟಕ್ಕೆ ತರಲು ಕಾರಣಳಾಗಿದ್ದಾಳಂತೆ. ಅವಳಾದರೂ ಶಿಲ್ಪ ಕಲೆಯಲ್ಲಿ ಇವನಷ್ಟು ನಿಪುಣಳಿರುವಳಂತೆ. ಸರಿ ನೋಡಬೇಕು. ಆ ಆದರ್ಶ ದಂಪತಿಗಳನ್ನು....... ಮಾತು ಮುಗಿಯುತ್ತಲೇ ಆ ಮಹಾ ಶಿಲ್ಪಿ ವೇದಿಕೆಯನ್ನು ಅಲಂಕರಿಸಿದನು. ಅವನ ಎಡಬದಿಗೆ ಅವನ ಸತಿ ಶಿರೋಮಣಿಯೂ ಮಂಡಿಸಿದ್ದಳು ನೆರೆದ ಜನಸ್ತೋಮವು ಹರ್ಷೋದ್ಗಾರದಿಂದ ಚಪ್ಪಾಳೆ ತಟ್ಟಿತು. ಅದೆಷ್ಟೋ ಜನ ಶಿಲ್ಪಿವರ್ಯನ ಗುಣಗಾನ ಮಾಡಿದರು. ಇನ್ನೆಷ್ಟೋ ಜನ ಹಾಡು ಹಾಡಿದರು... ಕೊನೆಗೆ ಆ ಮಹಾ ಶಿಲ್ಪಿ ಭಕ್ತಾಂಜಲಿ ಪುಟನಾಗಿ ಧನ್ಯವಾದಗಳನ್ನರ್ಪಿಸಿ, ಮುಸುಕಿನ ಮರೆಯಲ್ಲಿರಿಸಿದ್ದ ಒಂದು ಬಂಡೆಗಲ್ಲು, ಇನ್ನೊಂದು ಸರ್ವಾಂಗ ಸುಂದರವಾದ ಹೆಣ್ಣು ಮೂರ್ತಿಯನ್ನು ಜನತೆಗೆ ತೋರಿಸಿದನು. ಆದರೆ ಜನರು ವೈಯೆಲ್ಲಾ ಕಣ್ಣಾದಂತೆ ಎದುರಿಗೆ ನಿಂತಿದ್ದ ಆ ಸರ್ವಾಂಗ ಸುಂದರ ಶಿಲಾಕನ್ಯೆಯನ್ನೇ ನೋಡುತ್ತಿದ್ದರು. ಹರ್ಷೋದ್ಗಾರದಿಂದ 'ಆಹಾ! ಆಹಾ! .........' ಎಂದು ಕೂಗಿದರು......... ಕೆಲವರು ಬೆರಗುಗಣ್ಣುಗಳಿಂದ ಆ ಶಿಲ್ಪಿಯನ್ನೇ ನೋಡುತ್ತಿದ್ದರು. ಆಗ ಆ ಮಹಾ ಶಿಲ್ಪಿ ಏನು ಹೇಳಿದ ಗೊತ್ತೇ?

" ಓಹೋ ...... ಮೊದಲು ಈ ವಿಗ್ರಹವನ್ನು ನೋಡಬೇಡಿರಿ; ಈ ಬಂಡೆಗಲ್ಲನ್ನು ನೋಡಿರಿ." ಜನರು ದಿಗಿಲುಗೊಂಡು ನೋಡತೊಡಗಿದರು. ಕೆಲವರಿಗೆ ನಗುವೂ ಬಂತು, ನಕ್ಕು ಬಿಟ್ಟರು. ಮತ್ತೆ ಆ ಶಿಲ್ಪಿ ಇಂತು ನುಡಿದ " ನಗಬೇಡಿರಿ ,ನಗೆಯ ಹಿಂದೆ ಅಳು ಇದೆ " ಎಲ್ಲರೂ ಮೌನಿತರಾದರು. ಶಿಲ್ಪಿ ಸಂದೇಶವನ್ನೀಯತೊಡಗಿದ. "ಇದು ಬಂಡೆಗಲ್ಲು ! ಇದಕ್ಕೆ ಯಾವ ಆಕಾರವಿಲ್ಲ. ಇದರಲ್ಲಿ ಮೋಹಕತೆ ಇಲ್ಲ. ಕರುಣೆ ಇಲ್ಲ. ಹೃದಯವಿಲ್ಲ. ಇದು ನೀರಸವಾದ ಬಂಡೆಗಲ್ಲು ! "

" ಈ ಬಂಡೆಗಲ್ಲನ್ನು ನನ್ನ ಶಿಲ್ಪ ಕೌಶಲ್ಯದಿಂದ ಕೆತ್ತಿದೆ. ಸುತ್ತಿಗೆಯಿಂದ ಮೇಲುಭಾಗದ ಉರುಟುತನವನ್ನು ನಾಶಪಡಿಸಿದೆ. ನಂತರ ಬಂಡೆಗಲ್ಲನ್ನೇ ...... ಈಗ ನಿಮ್ಮೆದುರಿಗೆ ಮೂರ್ತಿವಂತ ಶಿಲಾಕನ್ಯೆಯ ರೂಪವಲ್ಲಿ ಇಟ್ಟಿದ್ದೇನೆ. ನೀವೀಗ ಇದಕ್ಕೆ ಬಂಡೆಗಲ್ಲು ಎನ್ನಲಾರಿರಿ. ಹೃದಯವಿಲ್ಲವೆನ್ನಲಾರಿರಿ. ರೂಪವಿಲ್ಲವೆನ್ನಲಾರಿರಿ. ನೋಡಿರಿ. ಆಗಿನ ಬಂಡೆಗಲ್ಲು ಈಗ ಸಜೀವವಾಗಿ ನಿಮ್ಮೆದುರಿಗೆ ನಿಂತಿದೆ. ಇದಕ್ಕೆ ಮೋಹಕ ಮುಖಮುದ್ರೆ, ನಿಮ್ಮನ್ನು ಆಕರ್ಷಿಸಿಕೊಳ್ಳುವ ನೋಟ, ಸಜೀವ ಕಳೆ ಎಲ್ಲವೂ ಇವೆ. ಎಲ್ಲಕ್ಕಿಂತಲೂ ಮಿಗಿಲಾದ ಕಲಾತ್ಮಕ ಹೃದಯ ಈ ಬಂಡೆಗಲ್ಲಿಗೆ ಬಂದಿದೆ. ನೋಡಿರಿ. ನೋಟದಲ್ಲಿ ಸಂದನವಿದೆ. ನಿಲುವಿಕೆಯಲ್ಲಿ ನಾವಿನ್ಯವಿದೆ. ಸಜೀವತೆ ತುಂಬಿ ತುಳುಕುತ್ತದೆ. ರಸಾಸ್ವಾದತೆಯಸೌಜನ್ಯವಿದೆ; ಕಸವನ್ನೇ ರಸವೆಂದು ತಿಳಿದುಕೊಳ್ಳುವ ಕಲಾತ್ಮಕ ಹೃದಯವಿದೆ.

**ನೀವೆಲ್ಲಾ ಶಿಲ್ಪಿಗಳಾಗಿರಿ. ಈ ಜಗವು, ಈ ಜನಾಂಗ, ಈ ಮನಸ್ಸು, ಈ ಬುದ್ಧಿ ಬಂಡೆಗಲ್ಲಿನಂತಿದ್ದರೂ ನೀವು ಶಿಲ್ಪಿಗಳಾದರೆ ಬದುಕ ಬಲ್ಲಿರಿ. ಕಸದಲ್ಲಿ ರಸವನ್ನು ಕಂಡು, ಜೀವನದ ರಸಾನುಭೂತಿಯನ್ನು ಪಡೆಯಬಲ್ಲಿರಿ. ನೀವೆಲ್ಲಾ ಶಿಲ್ಪಿಗಳಾದರೆ ಯಾವುದು ಬಂಡೆಗಲ್ಲಾಗಿರುವುದೋ ಅದೆಲ್ಲಾ ನಿಮ್ಮ ಪಾಲಿಗೆ ಸರ್ವಾಂಗ ಸುಂದರವಾದ ಸಜೀವ ಮೂರ್ತಿಯಾಗಿ ನಿಲ್ಲಬಹುದು. ನೀವು ಶಿಲ್ಪಿಗಳಾದರೆ ಕಸವೆಲ್ಲಾ ರಸ !** ಶಿಲ್ಪಿಯ ಮಾತು ಮುಗಿಯುತ್ತಲೇ ಜನಸ್ತೋಮವು

ಹರ್ಷ ಭರಿತವಾಗಿ ಚಪ್ಪಾಳೆ ತಟ್ಟತೊಡಗಿತು. ಉದ್ಗಾರದಿಂದ ಉದ್ಘೋಷಿಸತೊಡಗಿತು. ಆ ಆರ್ಭಟಕ್ಕೆ ನನಗೆ ಎಚ್ಚರವಾಯಿತು. ನಾ ಕಂಡ ಕನಸು ನನಸಿನಲ್ಲಿರಲಿಲ್ಲ. ಕರಗಿ ಕಾಣದಾಗಿತ್ತು. ಆದರೇನು ಆ ಶಿಲ್ಪಿಯ ಸಂದೇಶ ಸಾವಿರುಸಲ ಮಾರ್ನುಡಿಯಿತು.

“ **ನೀವು ಶಿಲ್ಪಿಗಳಾದರೆ ಕಸವೆಲ್ಲಾ ರಸ** ”

**ಧಾರವಾಡ** ಡಿಸೆಂಬರ ೫. ೧೯೬

# ಹಳ್ಳದ ದಂಡೆಯ ಮೇಲೆ?

A man must have the power of the devil
But not use it as the devil.

*Shakespeare.*

ಹದ್ದು ಕಾಗೆಗಳು ಹರಿದು ತಿನ್ನುತ್ತಿದ್ದವು. ಚುಂಚುಗಳಿಂದ ಚುಚ್ಚಿ, ಚುಚ್ಚಿ ಮಾಂಸದ ಕರಣೆಗಳನ್ನು ಕೀಳುತ್ತಿದ್ದವು. ಕಾಲುಗಳಿಂದ ಕೆದರಿ, ಕೆದರಿ, ಮೈಮೊಗಲನ್ನು ಜಿಗಿಯುತ್ತ, ರಕ್ತಲೇಪಿತವಾದ ಮುಖವನ್ನು ಮೇಲೆತ್ತಿ ಸುತ್ತಲೂ ನೋಡುತ್ತಿದ್ದವು! ಮಾಂಸವನ್ನು ತಿಂದು, ರಕ್ತವನ್ನು ಕುಡಿದು, ಮದೋನ್ಮತ್ತವಾದ ಕಾಗೆಗಳು " ಕಾ ... ಕಾ ...... " ಎಂದು ಕೂಗಿ ತಮ್ಮ ಬಳಗವನ್ನೇ ಕರೆಯುತ್ತಿದ್ದವು. ಹದ್ದುಗಳು ಹರಿಯುತ್ತ ಹಾರಾಡುತ್ತಿದ್ದವು. ಇನ್ನುಳಿದವುಗಳು ಮನಸಾರೆ ತಿಂದು, ಮಕ್ಕಳಿಗಾಗಿ ಗೂಡಿಗೆ ಸಾಗಿಸುತ್ತಿದ್ದವು. ನಾಯಿಗಳು ಎಲುವು ಕಡಿಯುತ್ತ, ಸಿಕ್ಕ ತುಂಡು ತುಣುಕುಗಳನ್ನು ನುಂಗುತ್ತ, ಕಾಗೆ, ಗೂಗೆಗಳನ್ನು ಹೆದರಿಸುತ್ತಿದ್ದವು. ಏನೂ ಸಿಗದವುಗಳ ಆಕ್ರೋಶವಂತೂ ಹೇಳತೀರದು.

ರಕ್ತರಂಜಿತವಾಗಿ ಹಸಿವಿನ ಹೋರಾಟ ನಡೆದಿದ್ದರೂ ಆ ತಾಯಿ ಸುಮ್ಮನಿದ್ದಳು ! ಮನುಷ್ಯನ ಅಮಾನುಷ ಕೃತ್ಯಕ್ಕೆ ಶಪಿಸುತ್ತ, ಪಶು ಪಕ್ಷಿಗಳ ಹಸಿದ ಹೊಟ್ಟೆಯನ್ನು ತಣಿಸುತ್ತಿದ್ದಳು. ಈಶ್ವರ ದತ್ತವಾದ ದೇಹವನ್ನು ವ್ಯರ್ಥವಾಗಿ ಹಾಳು ಮಾಡದೆಯೇ ದಯಾಮಯದಿಂದ ದೇಹವನ್ನು ದಾನವಾಗಿಟ್ಟಿದ್ದಳು ! **ಅನ್ಯಾಯ, ಅಸತ್ಯದ ಮಾರ್ಬಲೆಯಲ್ಲಿ ಸಿಲುಕಿ, ನರಕಯಾತನೆಯನ್ನು ಅನುಭವಿಸುವುದಕ್ಕಿಂತ ಸತ್ಯದ ಪಥದಲ್ಲಿ ಸಾವನ್ನಪ್ಪುವದೇ ವಾಸಿ ಎಂದು ಮಲಗಿದ್ದವಳು.** ಸಮಾಜದಲ್ಲಿಯ ಕರ್ಮ ಕಾಂಡವನ್ನು ಕಾಣಬಾರದೆಂದು ಕಣ್ಣುಮುಚ್ಚಿದ್ದಳು. ಹೆಣ್ಣು-ಗಂಡುಗಳಲ್ಲಿಯ ಹೊಲಸು ವ್ಯವಹಾರವನ್ನು ಕಂಡು, ಕಹಿ ಫಲವನ್ನು ಉಂಡು, ಹೆಣ್ಣಿನ ಬಾಳಿನ ಗೋಳಿಗಾಗಿ ಕಣ್ಣೀರಿಡುತ್ತಿದ್ದಳು. ಅಕ್ಕ ತಂಗಿಯರೆಂಬ ಪವಿತ್ರ ಭಾವನೆ ಇಲ್ಲದೆಯೇ ಪುರುಷರು ಸ್ತ್ರೀಯರ ಮೇಲೆ ನಡೆಸುತ್ತಿರುವ ಘೋರ ಕೃತ್ಯಕ್ಕೆ ಆತ್ಮವನ್ನು ಬಲಿಕೊಟ್ಟು, ಇನ್ನುಳಿದ ಸೋದರಿಯರಿಗೆ ತನ್ನ ದುರಂತ ಜೀವನದ ಚಿತ್ರವನ್ನು ರಕ್ತದ ಲೇಖನಿಯಿಂದ ಚಿತ್ರಿಸುವಂತಿದ್ದಳು. ಅಂತೂ ಹಳ್ಳದ ದಂಡೆಯಲ್ಲಿ ದೇಹವನ್ನಿಟ್ಟು, ತಾನು ಎಲ್ಲಿಯೋ ಲೀನವಾಗಿದ್ದಳು !

ಮಧ್ಯಾಹ್ನದ ಎರಡು ಪ್ರಹರದ ಬಿಸಿಲಿಗೆ ಜಗವೆಲ್ಲ ನರಳುವಂತೆ ಭಾಸವಾಗುತ್ತಿದ್ದಿತು. ನನ್ನ ಕೈ ಕಾಲುಗಳ ದಣಿವು ಎಲ್ಲಿಯೋ ಮರೆಯಾಯಿತು. ಹೊರಟ ಕೆಲಸದ ನೆನಪೂ ಕೂಡ ನನಗಾಗಲಿಲ್ಲ. ರಣಗುಡುವ ಬಿಸಿಲಿನಲ್ಲಿ ನಿಂತುಕೊಂಡು ಆ ದೃಶ್ಯವನ್ನೇ ನೋಡುತ್ತಿದ್ದೆ !

ನಿನ್ನೆ ಕೇಳಿದ ಕಥೆ, ಗೆಳೆಯ ಹೇಳಿದ ಆ ಹುಡುಗಿ ಇವಳೇ ಎಂದು ದಿಗ್ಭ್ರಮೆಗೊಂಡೆ. ಮನಸ್ಸಿನಲ್ಲಿ ಏನೇನೋ ಕಲ್ಪನೆಗಳು ಉದ್ಭೂತವಾದವು. ಅವಳ ಜೀವನವು ಸ್ಮೃತಿ ಪಟಲದ ಮೇಲೆ ಸುಳಿದಾಡತೊಡಗಿತು. ಕೈಯಲ್ಲಿಯ ಸೋಪು ನೆಲಕ್ಕುರುಳಿತು. ಹೆಗಲ ಮೇಲಿನ ಅರಿವೆ ಗಾಳಿಗೆ ಅಲುಗಾಡಿ ಕಾಲ ಕೆಳಕ್ಕುರುಳಿತು. ಮೈ ಬೆವರು ಪಾದಗಳ ವರೆಗೂ ಮುಟ್ಟಿತು. ಆ ಸಮಯ ತೋಟದ ಭಾವಿಯು ನೆನಪಾಗಬಹುದೇ ? ಹಳ್ಳದ ದಂಡೆಯಿಂದ

ಹಿಂದಿರುಗಿದೆ. ಹೇಗೆ ಬಂದು ಮನೆಯನ್ನು ಮುಟ್ಟಿದೆನೋ ಕಾಣೆ! ಮಂಚದ ಮೇಲೆ ಮಲಗಿದ್ದರೂ ಅದೃಶ್ಯ ಮರೆಯಾಗಿರಲಿಲ್ಲ.

ಕಾಗೆ ಗೂಗೆಗಳು ಹರಿಯುತ್ತಿದವು! ನಾಯಿಗಳು ಎಲುವು ಕಡಿಯುತ್ತಿದ್ದವು! ಮೋಹಪೂರಿತವಾಗಿದ್ದ ಅವಳ ಕಣ್ಣುಗಳು ಭೀಕರ ತೂತುಗಳಾಗಿದ್ದವು! ಬಾಗಿಲ ಬಂದು ಮಾಡಿ, ಕಣ್ದೆರೆದು ಮಂಚದ ಮೇಲೆ ಮಲಗಿದ್ದರೂ ಮನಸ್ಸು, ಹಳ್ಳದ ದಂಡೆಯ ಮೇಲೆ ನಿಂತು " ಗೊಳೋ " ಎಂದು ಅಳುತ್ತಿದ್ದಿತು. ಜೀವನದ ದುರಂತ ಚಿತ್ರವನ್ನು ಯಾವುದೋ ಒಂದು ಕುಂಚದಿಂದ ಕಲ್ಪನೆಯು ಚಿತ್ರಿಸುತ್ತಿದ್ದಿತು. ಆ ಸಮಯಕ್ಕೆ ತುದಿಮೊದಲುಗಳಿರಲಿಲ್ಲ. ಬಾಗಿಲು ಬಡಿಯುವ ಸಪ್ಪಳಕ್ಕೆ ಮೈ ಜುಮ್ಮೆಂದು ಭಾವನಾಭಂಗವಾಗಿ, ಸಿಟ್ಟು ತಾನೇ ತಾನಾಗಿ ಕೂಗಿಕೊಂಡಿತು.

" ಯಾರವರು ? "

" ನಾನು ರಾಜು "

ಬಾಗಿಲು ತೆರೆಯಿತು!

ಸಿಟ್ಟಿಗೆ ಸಮಾಧಾನದ ಗೋಡೆ ಅಡ್ಡಗಟ್ಟಿತು.

ರಾಜುವಿನ ದೃಷ್ಟಿಕೋನಗಳೆಲ್ಲ ನನ್ನ ಮುಖದ ಮೇಲೆ ಕೇಂದ್ರೀಕೃತವಾದವು. ಆದರೆ ಅವನ ಮುಖವನ್ನು ನನ್ನ ಕೆಂಪಾದ ಕಣ್ಣುಗಳು ನೋಡಲು ಹಿಂಜರಿದವು. ಸ್ವಾಗತಿಸಲು ಮಾತು ಹೊರಬರಲಿಲ್ಲ ರಾಜುವಿಗೆ ಅದೊಂದು ಬಿಡಿಸಲಾರದ ಪ್ರಶ್ನೆಯಾಗಿರಬೇಕು. ಅದಕ್ಕಾಗಿಯೇ ಹೀಗೆ ನುಡಿದ.

ನಾನು ಮಾತಾಡಲಿಲ್ಲ. ಮಾತುಗಳನ್ನೆಲ್ಲ ಮೌನ ನುಂಗಿತ್ತು. ಅವನಿಗೂ ಕಳವಳವೆನಿಸಿ ಕಣ್ಣೀರು ಗರೆಯುತ್ತ ನುಡಿದ.

" ಏಕೆ ಹೇಳುವದಿಲ್ಲವೇ ? ಏನಾಯಿತು ?? "

" ಕೇಳಬೇಕಾದರೆ ದಯಮಾಡಿ ನಾಳೆ ಬಾ ! "

"ಇಲ್ಲಿ ನೀನು ತೋಟದ ಭಾವಿಯ ಹೋಗಿರಲಿಲ್ಲವೆ?" ರಾಜು ಕೇಳಿದ.

''ಅಲ್ಲಿಗೆ ಹೋದಮೇಲೆ ........''

'' ಏಕೆ ಯಾರಾದರೂ ಏನನ್ನಾದರೂ ಅಂದರೆ ?

" ಯಾರು ಅನ್ನಬೇಕು ರಾಜು. ದೈವಗತಿ ? "

'' ಹಾಂ ! ದೈವಗತಿ !! ಮೊದಲು ಹೇಳು "

'' ಏನೂ ಇಲ್ಲ. ನೀನು ನಿನ್ನೆ ಹೇಳಿದೆಯಲ್ಲಾ. ಅದು ! "

'' ಅಂದರೆ ........... ? ಆ ನಿಮ್ಮಿಯದೇ ? ''

ರಾಜು ಪ್ರಶ್ನಿಸಿದ.

'' ಹೌದು ! ಅಯ್ಯೋ ! ನೆನೆಸಿಕೊಂಡರೆ ಈಗಲೂ ಭಯ ಬರುತ್ತದೆ. ರಾಜು ಸತ್ತ ಮೇಲೆ ಮನುಷ್ಯನ ದೇಹಕ್ಕೆ ಬೆಲೆ ಎಷ್ಟು ? " ಎನ್ನುವುದರೊಳಗಾಗಿಯೇ ದುಃಖ ಉಕ್ಕಿ ಬಂತು, ಕಂಡ ದೃಶ್ಯವನ್ನು ಎಳ್ಳನಿತೂ ಬಿಡದೆ ಹೇಳಿದೆ. ಅವನೂ ಅತ್ತು ಬಿಟ್ಟ !

X X X X X X X

ರಾಜು ಕಣ್ಮರೆಯಾಗಿದ್ದರೂ ಅವನು ಹೇಳಿದ ಮಾತುಗಳು ನನ್ನನ್ನು ಚುಚ್ಚುತ್ತಿದ್ದವು.

ಸಮಾಜ ಘಾತುಕರ ಕೊಲೆಪಾತಕತನವು ಅನ್ಯಾಯದ ಖಡ್ಗವನ್ನು ಹಿಡಿದು, ಖಾಡಾಖಾಡಿ ನಡೆಸಿದ್ದಿತು; ಕಾಮುಕರು ರಕ್ತ ನಾಲಿಗೆಯನ್ನು ಚಾಚಿ, ರುದ್ರ ಭಯಾನಕತೆಯನ್ನು ತೋರ್ಪಡಿಸುತ್ತಿದ್ದರು. ಹೆಂಡಂದಿರಿಲ್ಲದ ಉಂಡಾಡಿಗಳು ಆ ಭಿಕಾರಿಯ ಮೇಲೆ ಬಲತ್ಕಾರ ಮಾಡಿ, ಅವಳ ಶೀಲವನ್ನೇ ಹಾಳು ಮಾಡಿ, ಈ ತೆರನಾದ ದುರ್ಧರ ಪರಿಸ್ಥಿತಿಗೀಡು

ಮಾಡಿದ. ದಾನವೀಕೃತ್ಯ ಪಾಪದ, ಪೀಠದ ಮೇಲೆ ಕುಳಿತು ಅರಾಜ್ಯಕತೆಯನ್ನು ನಡೆಸಿದ್ದಿತು. ಹೊಟ್ಟೆಯ ಪಾಡಿಗಾಗಿ ಬಂದು ನೆಲೆಸಿದ್ದ ಆ ನಿರ್ಗತಿಕಳಿಗೆ ಮರಣವೇ ಆಶ್ರಯವಾಯಿತು !

ನಿಮ್ಮಿ ನಿರ್ಗತಿಕಳಾಗಿದ್ದರೂ ಆವಳ ಅಣ್ಣ ಬೆನ್ನೆಲುಬಿನಂತಿದ್ದನು. ದಿನದ ದುಡಿತನವನ್ನು ಹಸಿದ ಹೊಟ್ಟೆಗೆ ಹಾಕಿ, ಈರ್ವರೂ ಕಾಲು ಮುಗುಚಿಕೊಂಡು ಮಲಗುತ್ತಿದ್ದರು. ಏನಿಲ್ಲವೆಂದರೂ ದಿನಕ್ಕೆ ಒಂದೆರಡು ರೂಪಾಯಿಗಳನ್ನು ನದುಡಿದೇ ದುಡಿಯುತ್ತಿದ್ದರು. ಕಂಬಳಿಗೆ 'ಕರೆ' ಕಟ್ಟುವದೇ ಅವರ ಮೂಲೋದ್ಯೋಗ. ಎಂಟೂ ಬೆರಳಿಗೆ ಬಣ್ಣದ ದಾರವನ್ನು ಸುತ್ತಿಕೊಂಡು ನಿಮ್ಮಿ, ಬೆರಳಿನಿಂದ ಬೆರಳಿಗೆ ಬದಲಾಯಿಸುತ್ತಿದ್ದಳು. ಅಣ್ಣನು ಕಂಬಳಿಯ ಅಂಚಿನಲ್ಲಿ ಹೆಣಿಕೆ ಹಾಕುತ್ತಿದ್ದನು. ಅವರ ಈ ಕೆಲಸವನ್ನು ನಿಂತು ನೋಡಬೇಕು ! ಹೀಗೆಯೇ ಅವರ ಜೀವನ ನಡೆದು ಏಳು ವರ್ಷಗಳ ಮೇಲಾಗಿವೆ. ಇಂದು ಈ ಊರಲ್ಲಿದ್ದರೆ ನಾಳೆ ಮತ್ತೊಂದು. ಆದರೆ .......... ನಮ್ಮೂರಿಗೆ ಅವರು ಬಂದಾಗ ನಿಮ್ಮಿಯ ಅಣ್ಣನಿಗೆ ಕೈಕಾಲು ಶೂಲಿ ಹಿಡಿದು, ಊರಲ್ಲಿ ಒಬ್ಬ ಗ್ರುಹಸ್ಥರ ಕಡೆಗೆ ೨೦ ರೂಪಾಯಿ ಸಾಲ ಮಾಡಿದ್ದರು, ಆ ಸಾಲ ತೀರುವ ವರೆಗೂ ಅವರು ನಮ್ಮ ಊರನ್ನು ಬಿಡುವಂತಿರಲಿಲ್ಲ !

ನಿಮ್ಮಿ ರೂಪವತಿಯಾಗಿದ್ದಳು, ಆ ರೂಪವೇ ಅವಳಿಗೆ ಮೃತ್ಯುವಾಗಿ ಪರಿಣಮಿಸಿತು. ಆ ಸೌಂದರ್ಯವೇ ಆವಳಿಗೆ ಕಂಟಕ ಪ್ರಾಯವಾಗಿ ಪರಿಣಮಿಸಿತು. ಅಯ್ಯೋ ! ಬಡವರಿಗೆ ಸೌಂದರ್ಯವೂ ಬೇಡ !

ನಿಮ್ಮಿ ಅದೇ ಆಗ ತಾರುಣ್ಯದ ಹೊಸ್ತಿಲದಲ್ಲಿ ಕಾಲಿಟ್ಟವಳು. ಏನನ್ನೂ ಅರಿಯದವಳು. ಚಿಕ್ಕವಳಿರುವಾಗಲೇ ತಂದೆ ತಾಯಿಗಳನ್ನು ಕಳೆದುಕೊಂಡವಳಾದುದರಿಂದ ಅಣ್ಣನ ಆಶ್ರಯದಲ್ಲಿ ಜೀವಿಸುತ್ತಿದ್ದಳು.

ಅಚ್ಚುಕಟ್ಟಾದ ಮೈಕಟ್ಟು; ನಸುಗೆಂಪು ಬಣ್ಣ. ಬಡತನವನ್ನೇ ಎತ್ತಿ ತೋರಿಸುವ ಬಟ್ಟೆಗಳು. ಆದರೂ ಆವಳು ಸುಂದರ ಯುವತಿಯಾಗಿದ್ದಳು. ಅಣ್ಣನ ಬೆನ್ನು ಹಿಂದೆ ಊರಲ್ಲಿ ತಿರುಗಾಡುವಾಗ ನೆಲವನ್ನೇ

ನೋಡುತ್ತಿದ್ದಳು: ಯಾರೊಡನೆ ಮಾತನಾಡಿದರೂ ಭ್ರಾತೃತ್ವವನ್ನೇ ವ್ಯಕ್ತ ಪಡಿಸುತ್ತಿದ್ದಳು. ವಿನಯ ಶೀಲೆಯಾದ ಆ ತಾಯಿಯಲ್ಲಿ ಬಡತನವೇ ಘನೀ ಭೂತವಾಗಿದ್ದರೂ, ಅದನ್ನು ತೋರ್ಪಡಿಸಳು. ಹೊಟ್ಟೆಗೆ ಹಿಟ್ಟಿಲ್ಲದ ದಿನವೂ ಕುಲುಕುಲು ನಗುತ್ತಿದ್ದಳು.

ಮುಂಜಾವಿನ ಹಾಳು ಮೋರೆಯನ್ನು ತೊಳೆದುಕೊಂಡು ಅಣ್ಣ— ತಂಗಿಯರೀರ್ವರೂ ಊರನ್ನೆಲ್ಲ ತಿರುಗಾಡಿ, ಸಿಕ್ಕ ಕೂಲಿಯನ್ನೇ ಸೆರಗಿ ನಲ್ಲಿ ಕಟ್ಟಿಕೊಂಡು ಮಧ್ಯಾಹ್ನಕ್ಕೆ ನಮ್ಮೂರ ಗರಡಿಯ ಕಟ್ಟೆಯ ಮೇಲೆ ಕೂಡುತ್ತಿದ್ದರು. ಬಡತನದ ಅಡುಗೆಯನ್ನು ಮುಗಿಸುವದು ತಡವೇ? ಅಡುಗೆ, ಊಟದ ಕಾರ್ಯವನ್ನು ಮುಗಿಸಿಕೊಂಡು, ಒಂದು ಬಿಸಿಯುಸಿರ ನ್ನೆಳೆದು ಮಲಗುವರು. ಮತ್ತೆ ಊರನ್ನೆಲ್ಲ ತಿರುಗಾಡಿ ಸಂಜೆಗೆ ಅಲ್ಲಿಗೆ ಬರುತ್ತಿದ್ದರು. ಇಷ್ಟಾದರೆ ತೀರಿತು. ಒಂದು ದಿನ ತಾನೇ ತಾನಾಗಿ ಉರುಳಿ ಹೋಗುತ್ತಿತ್ತು !

ಊರ ಕಾಮುಕರ ಕಣ್ಣು ನಿಮ್ಮಿಯ ಮೇಲೆ ನಟ್ಟಿತೆಂದು ಬೇರೆ ಹೇಳ ಬೇಕಾಗಿಲ್ಲ. ಒಳ್ಳೊಳ್ಳೆಯ ತರುಣರು ನೆವದಿಂದ ನುಡಿಯ ತೊಡಗಿದರು. ಕೆಲವರು " ನಿನ್ನ ಲಗ್ನವಾಗಿದೆಯೇ ? " ಎಂದು ಕೇಳುತ್ತಿದ್ದರು. ಮತ್ತೆ ಕೆಲವರು ಅವಳನ್ನು ಕಂಡಾಗ ಕೈಸನ್ನೆ ಮಾಡುವರು. ಕೆಲವರಂತೂ ಅವಳನ್ನು ನಾಶಪಡಿಸಲು ನಡುಕಟ್ಟಿ ನಿಂತರು. ಒಂದೊಂದು ದಿನ ಅವ ಳಿಲ್ಲದ ಸಮಯದಲ್ಲಿ ತಿಂಡಿತಿನಿಸುಗಳನ್ನಿಟ್ಟು ಹೋಗುತ್ತಿದ್ದರು. ಸೀರೆ ಕುಪ್ಪಸಗಳನ್ನು ತೋರಿಸುತ್ತಿದ್ದರು. ನೋಟುಗಳನ್ನು ಎಸೆಯುತ್ತಿದ್ದರು ಮನೆಯಲ್ಲಿಯ ಸಣ್ಣ ಹುಡುಗರ ಕೈಯಲ್ಲಿ ಊಟದ ತಟ್ಟೆಯನ್ನು ಕೊಟ್ಟು ಕಳುಹಿಸುತ್ತಿದ್ದರು. ತಮ್ಮ ಮನೆಯಲ್ಲಿ ಕೆಲಸವಿರದಿದ್ದರೂ ಅವಳನ್ನು ಸುಮ್ಮನೇ ಕರೆದು ಮಾತನಾಡಿಸುವವರೂ ಕಡಿಮೆ ಇರಲಿಲ್ಲ!

ನಿಮ್ಮಿ ಹೆಣ್ಣಿನ ಜೀವನವನ್ನು ಪೃಥಃಕರಿಸಿದಳು, ನ್ಯಾಯಾನ್ಯಾಯ ಗಳ ವಿಮರ್ಶೆ ಮಾಡಿದಳು, ಕೊನೆಗೆ ಹೆಣ್ಣಿನ ಜೀವನಕ್ಕೆ ಧಿಕ್ಕಾರೆಂದಳು !

ಕ್ಷಣಿಕಸುಖಕ್ಕೆ ಮಾರು ಹೋದರೆ, ಮನುಷ್ಯತ್ವವನ್ನು ಉಳಿಸಿಕೊಳ್ಳ ಲಾರೆ; ಆತ್ಮಗೌರವವನ್ನು ಕಾಯ್ದುಕೊಳ್ಳಲಾರೆನೆಂಬ ಕಲ್ಪನೆಯನ್ನು ತಂದು ಕೊಂಡು, ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಳು. "ನಿರ್ಗತಿ ಕರಿಗೆ ನೀತಿಯೇ ರಕ್ಷೆ" ಎಂದು ನಂಬಿದಳು.

ನಾಲ್ಕು ತಿಂಗಳು ಸಂದಿದವು!

ನಿಮ್ಮಿಗೆ ಖಡ್ಗದ ತುದಿಯ ಮೇಲೆ ನಡೆದಂತಾಯಿತು. ಮುಳ್ಳಿನ ಮಾರ್ಗವನ್ನು ತುಳಿದಂತಾಯಿತು. ಅವಳಿಗೀಗ ಹೊಟ್ಟೆಯ ಚಿಂತೆ ಎಲ್ಲಿಯೋ ಮರೆಯಾಯಿತು. ತನ್ನ ಮಾನರಕ್ಷಣೆಯ ದಾರಿಯೇ ಬೇಕಾಯಿತು. ಅಹುದು ಮಾನವಂತರ ಮಾರ್ಗವೇ ಅದು.

ಅಣ್ಣನಿಗೆ ಜೀವನವೇ ಬೇಡವೆನಿಸಿತು. ಬಡವರಾಗಿ ಬಾಳಬಾರದೆಂದೆನಿ ಸಿತು. ಸಮಾಜ ಘಾತುಕರ ಕಾಮಾಂಧತೆ ಅವನನ್ನು ಮುಸುಕಿಕೊಂಡಿತು. ಜೀವನದಲ್ಲಿ ಎಲ್ಲಲ್ಲೂ ಬೆಳಕಿಲ್ಲ. ಅವನೂ ಜನರಿಂದ ಅಪವಾದಿತನಾದನು. ಕೀಳು ಸಮಾಜದಿಂದ ತಂಗಿಯ ಬಿಡುಗಡೆ ಎಂತು? ಎಂದು ಕನವರಿ ಸುತ್ತಿದ್ದನು. ಅವನಿಗೂ ಹೊಟ್ಟೆಯ ಚಿಂತೆಯಿಲ್ಲ, ಅವಳಂತೆ ಮರ್ಯಾ ದೆಯದು!

ಕುಲುಕುಲು ನಗುವ ಮುಖಗಳು ಕಂದಿಹೋದವು. ತುಟಿಗಳು ರಕ್ತ ಹೀನವಾದವು. ದೇಹಗಳು ಬಡಕಾದವು. ಒಬ್ಬರಿಗೊಬ್ಬರು ಎದುರು ಕುಳಿತುಕೊಂಡು, ಯೋಚನೆಗೈಯುವದನ್ನು ನೋಡಿದರೆ ಎದೆಕರಗಿ ನೀರಾ ಗಬೇಕು. ಮನುಷ್ಯನು ಮರ್ಯಾದೆಯಿಂದ ಬಾಳಬೇಕಾದರೆ ಜೀವನ ವನ್ನೇ ತ್ಯಾಗ ಮಾಡಬೇಕೆಂಬ ಕಲ್ಪನೆ ಬಾರದಿರುತ್ತಿರಲಿಲ್ಲ. ಅಣ್ಣನು, ನಿಮ್ಮಿಯು ಬಿಸಿಯುಸಿರುಗರೆಯುವದನ್ನು ಮರೆಯುವಂತಿರಲಿಲ್ಲ. ಅದನ್ನು ನೋಡುವದು ಕಟುಕನಿಗೂ ಆಗದು! ಕೊಲೆಪಾತಕಿಗೂ ಆಗದು!! ಅವ್ಯ ವಹಾರಿಕ ಘಟನೆಗಾಗಿ ಆ ಬಡ ಜೀವಿಗಳು ಪಡುವ ಕಷ್ಟವನ್ನು ಕಣ್ಣಾರೆ ಕಾಣಬಾರದು!

ಆಹಾರವಿಲ್ಲದ ಕರುಳುಗಳು ಒಂದೇ ಸವನೆ ಕೂಗುತ್ತಿದ್ದವು. ಹೊಟ್ಟೆಯ ಹೋರಾಟದಲ್ಲಿ ಒದಗಿದ ದುರಂತಕ್ಕೆ ನೆಲೆಯಿಲ್ಲ!

ಮನೆಯ ಸಾಮಾನುಗಳು ಕಳವಾದವು. ಕೆಲವು ಅರಿವೆಗಳು ಮಾಯವಾದವು. ಮನೆಯ ಮಾಳಿಗೆಗೆ ಕಲ್ಲುಗಳ ಸುರಿಮಳೆ ಸುರುವಾಯಿತು. ಇಂದೊ ನಾಳೆಯೋ ......... ಅವರಿಗೆ ಮರಣವೆನ್ನುವಂತಾಯಿತು. ನಿಮ್ಮಿ ಜನ್ಮದ ಆಶೆಯನ್ನೇ ಬಿಟ್ಟಳು. ಆದರೇನು ಮರ್ಯಾದೆಗಾಗಿ ಪರಿಶ್ರಮವಹಿಸುವಳು. ಧೃತಿಗೆಟ್ಟ ಅಣ್ಣನಿಗೆ ಆಕೆ ಪ್ರಶ್ನಿಸಿದಳು.

"ಅಣ್ಣಾ ನಮ್ಮನ್ನು ಸಲಹುವರಾರು?"



"ದೇವರು ತಂಗೀ ......"



"ದೇವರು! ಆ ದೇವರು ಇರುವುದಾದರೂ ಎಲ್ಲಿ?" ಎನ್ನುತ್ತಿರುವಾಗ ಹೊರಗಡೆಗೆ ನಡೆಯುತ್ತಿದ್ದ, ಪಿಸುಮಾತುಗಳನ್ನು ಕೇಳುತ್ತ ಈರ್ವರು ಭೋರಿಟ್ಟರು. ಒಬ್ಬರನ್ನೊಬ್ಬರು ಬಲವಾಗಿ ಅಪ್ಪಿಕೊಂಡರು.

"ಅಣ್ಣಾ ನೀನೇ ಹೀಗಾದರೆ ನನ್ನನ್ನು ......"

"ನಿನ್ನನ್ನು ...... ನಿನ್ನ ದೈವ!" ಅಣ್ಣನು ಉತ್ತರಿಸಿದನು.

"ದೈವ! ಅಣ್ಣಾ ನನ್ನ ದೈವ ದು ......ರಂ ...... ತ ವಾಗಿದೆ." ಅಣ್ಣನು ಮೂರ್ಛೆ ಹೋದನು. ನಿಮ್ಮಿ ನೀರುತರಲು ಹೊರಗೆ ಧಾವಿಸಿದಳು. ಅಲ್ಲಿಯ ನಾಲ್ಕೆಂಟು ಜನರನ್ನು ಕಂಡು ಚಿಟ್ಟನೇ ಚೀರಿದಳು. "ಅಣ್ಣ ....... ಅಣ್ಣಾ ......" ಎನ್ನುತ್ತ ಓಡಿ ಬಂದು, ಅವನೆದೆಯ ಮೇಲೆ ಬಿದ್ದು, ಭೋರಿಡತೊಡಗಿದಳು. ಹೊರಗಿನ ಜನ ಎಲ್ಲಿಯೋ ಮಾಯವಾದರು. ಕೆಲನಿಮಿಷಗಳ ನಂತರ ಅವನಿಗೆ ಎಚ್ಚರವಾಯಿತು.

X X X X X

ಕಾಮುಕರ ಕಣ್ಣುಗಳು ಕೆರಳಿದವು. ಅವಳ ಶೀಲವನ್ನೇ ಹಾಳು ಮಾಡಲು ಹವಣಿಸುತ್ತಿದ್ದರು ಪುಣ್ಯ ಪರೋಪಕಾರಕ್ಕೆ ಮೀಸಲಾಗಬೇಕಾದ ಮನಸ್ಸು, ಹೇಸಿ ರೋಷಕ್ಕೆ ಆಸುವಾಯಿತು. ಅವಳ ಮೇಲೆ ರಾಕ್ಷಸೀಕೃತ್ಯ ವನ್ನೆಸಗಲು ಹಿಂದು ಮುಂದು ನೋಡಲಿಲ್ಲ. ದಾನ ಧರ್ಮಕ್ಕೆ ಮುಂಬರುವ ಕರಗಳು ಕೋಮಲೆಯ ಕೊಲೆಯಾಗಿ ಕುಣಿಯುತ್ತಿದ್ದವು. ಔದಾರ್ಯದ ಆರತಿ ಎತ್ತಿ ಬೆಳಗುವ ಭಾವಗಳು ಆ ಬಡಪಾಯಿಯ ದುರಂತ ಚಿತ್ರವನ್ನು ಮೂಡಿಸುತ್ತಿದ್ದವು. ಅಯ್ಯೋ ! ಆ ದಾನವರ ತಂಡದಲ್ಲಿ ಅಬಲೆ ಉಳಿಯ ಬಲ್ಲಳೇ ? ಆಗಲೇ ಬಲಾತ್ಕಾರ ನಡೆಯಿತು. **ಆಗಬಾರದ ಕೃತ್ಯ ಆಗಿ ಹೋಯಿತು !** ಎರಡು— ಮೂರು ಜನರು ಅವಳ ಅಣ್ಣನ ಬಾಯಿಯಲ್ಲಿ ಅರಿವೆಯನ್ನು ತುರುಕಿ, ಬಿಗಿದಿದ್ದರು. ಉಳಿದ ಏಳೆಂಟು ಜನರು ಆ ತಾಯಿಯ ( ನಿಮ್ಮಿಯ ) ಮೇಲೆ ಮಾಡಿದ ಕ್ರೌರ್ಯವನ್ನು ವರ್ಣಿಸ ಬಾರದು ! ನೆನಸಿಕೊಂಡರೆ ಈಗಲೂ ಭಯ ಬರುತ್ತದೆ. ಅವಳಿಗೂ ಬಾಯಿ ಯಿಲ್ಲ. ಅಲುಗಾಡಲು ಶಕ್ತಿಯಿಲ್ಲ. ನಿಮ್ಮಿ ನಿರ್ಗತಿಕಳು. **ಅವಳ ಪಾಲಿಗೆ ಜನರಿಲ್ಲ, ಸಮಾಜವಿಲ್ಲ, ಜಗತ್ತೆಲ್ಲವೂ ಪಾಪದಲ್ಲಿ ಮುಳುಗಿದ್ದಿತು. ನಿಮ್ಮಿ ದೇವನಲ್ಲಿ ನಂಬುಗೆ ಇಟ್ಟು, ದೇಹವನ್ನು** ಒಡ್ಡಿದಳು. ಯಾರು ಏನನ್ನು ಮಾಡಿದರೋ ಅವಳಿಗೆ ಅರಿವಿಲ್ಲ. ಕಾಮುಕರ ಕೃತ್ಯಕ್ಕೆ ಕೊನೆ ಯಿಹುದೇ ?

ನಿಮ್ಮಿಯ ಅಣ್ಣನಿಗೆ ತಲೆ ವಿಭ್ರಮವಾಯಿತು. ಕೀಳಲಾರದ ಕೈ ಗಳಿಂದ ಬಾಯಿಯಲ್ಲಿಯ ಅರಿವೆಯನ್ನು ಕಿತ್ತುಕೊಂಡು, ತಲೆಗೂದಲುಗ ಳನ್ನು ಕೆದರಿಕೊಂಡನು ! ಬಾಯಿಗೆ ಬಂದಂತೆ ಚೀರತೊಡಗಿದನು ! ಬೆಳೆದ ಉಗುರಿನಿಂದ ಮುಖವನ್ನು ಚಿವುರಿಕೊಂಡನು. ಸೋರುವ ರಕ್ತವನ್ನೇ ಕಂಬನಿದುಂಬಿದ ಕಣ್ಣುಗಳಿಂದ ನೋಡುವನು. ತಾಳಲಾರದ ವೇದನೆಯಾ ಗತೊಡಗಿತು. ತಂಗಿಯ ಮೈ ಮೇಲೆ ಬಿದ್ದು "ತಂಗೀ...... ತಂಗೀ..." ಎಂದು ಅಲುಗಾಡಿಸತೊಡಗಿದನು. ತಂಗಿ ಅಲುಗಾಡಲಿಲ್ಲ ! ದೇಹವನ್ನು ಬಿಟ್ಟು, ದೇವನಲ್ಲಿ ಲೀನವಾಗಿದ್ದಳು. ಅಲ್ಲಿ ತನ್ನ ದುರಂತ ಚಿತ್ರವನ್ನು, ರಾಕ್ಷಸೀ ಕೃತ್ಯವನ್ನು ದೇವನಿಗೆ ನಿವೇದಿಸುತ್ತಿದ್ದಳು.

ಮಲಗಿದ ಜನರು ಚೀರಾಟಕ್ಕೆ ಎಚ್ಚತ್ತರು. ನಾ ಮುಂದೆ ನೀ ಮುಂದೆ ಎಂದು ಗರಡಿಯ ಮನೆಯ ಕಟ್ಟೆಯನ್ನು ತುಂಬಿಕೊಂಡರು. “ ಏನಾಯಿತು? ಯಾರು ಬಂದಿದ್ದರು ......? ” ಎನ್ನತೊಡಗಿದರು. “ ಮೇಲಕ್ಕೆತ್ತಿರಿ... ನೀರು ಬಿಡಿರಿ ...... ” ಎನ್ನುವವರೂ ಹಲವರು. ಕರುಳಿದ್ದವರು ಕನಿಕರ ಪಟ್ಟರು. ಕೆಲವರು ಕಣ್ಣೀರಿಟ್ಟರು. ಇನ್ನುಳಿದವರು ಕಾಮುಕರನ್ನು ಗುರುತಿಸತೊಡಗಿದರು. [ಅವರಲ್ಲಿ ಪಾಪ ಕೃತ್ಯವನ್ನೆಸಗಿದವರೂ ಇದ್ದರೇನೊ!]

“ ಮೇಲಕ್ಕೆತ್ತಿರಿ ...... ನೀರು ಬಿಡಿರಿ ...... ಏನಾಗಿದೆ ನೋಡಿರಿ ...... ” ಎನ್ನುತ್ತಲೇ ಯಾರೋ ಅವಳನ್ನು ಮೇಲಕ್ಕೆತ್ತಿ ನಿಲ್ಲಿಸಿದರು.

ಅರೆಗಣ್ಣು ತೆರೆದಿದ್ದವು. ಕೂದಲುಗಳು ಕೆದರಿದ್ದವು. ಬಾಯಿಯಲ್ಲಿಯ ಅರಿವೆಯು ಮುದ್ದೆ ಹಾಗೆಯೇ ಇದ್ದಿತು. ದೇಹದ ಚಲನವಲನ ನಿಂತು ಹೋಗಿತ್ತು. ಕಾಂತಿಯುತ ಮುಖಮಂಡಲವು ಬಾಡಿದ ಹೂವಿನಂತಾಗಿತ್ತು. ಅಂತೂ ಆ ತಾಯಿಯು ದೇವನಲ್ಲಿ ಲೀನವಾಗಿದ್ದಳು.

ಮೈ ಮೇಲೆ ಬಟ್ಟೆ ಬರೆಗಳೇನೂ ಇಲ್ಲ. **ನಗ್ನವಾಗಿದ್ದಳು!** ಎರಡೂ ಕಾಲುಗಳ ಮೇಲ್ಗಡೆಯಿಂದ ರಕ್ತ ಹಾಗೆಯೇ ಸುರಿಯುತ್ತಿದ್ದತು. ಅಯ್ಯೋ! ಎಲ್ಲರೂ ಘೋರಿಟ್ಟರು. ಕಾಣಬಾರದ್ದೆಂದು ಕಣ್ಣು ಮುಚ್ಚಿಕೊಂಡರು...... ಎಲ್ಲರ ದುಃಖವೂ ಕಡಲಿನಂತೆ ಉಕ್ಕೇರಿತು!

X X X X X

ಮರುದಿವಸ ನಸುಕಿನಲ್ಲಿ ನಿಮ್ಮಿ ಹಳ್ಳದ ದಂಡೆಯ ಮೇಲಿದ್ದಳು. ಅವಳನ್ನು ಹದ್ದು-ಕಾಗೆ-ಗೂಗೆಗಳು ಹರಿದು ತಿನ್ನುತ್ತಿದ್ದವು. ನಾಯಿಗಳು ಎಲುವು ಕಡಿಯುತ್ತಿದ್ದವು ...**ನಡುನಡುವೆ ಕಾಗೆಗಳು ಊರ ಕಾಮುಕರನ್ನೂ ಕರೆಯುವಂತೆ ಕಾ ಕಾ ಎಂದು ಕೂಗುತ್ತಿದ್ದವು!**

**ಮೋಟೇಬೆನ್ನೂರ.** ೧೨—೩—೫೨

# ಮಣ್ಣಿನ ಮಗ..... ?

" ನಾವು ಹೇಗೆ ನಂಬಬೇಕು. ? "

" ಮೊದಲು ನಾವೂ ನಂಬಲಿಲ್ಲ. "

" ಹಾಗಾದರೆ ನೀವೇಕೆ ಸ್ವೀಕರಿಸಿದಿರಿ ? "

" ಮಗುವಿನ ಮುಖ ನೋಡಲಾರದೆಯೇ ! "

" ಸರಿ. ಇದ್ದುದನ್ನೆಲ್ಲ ಸರಿಯಾಗಿ ಹೇಳಿರಿ. ಯಾಕಂದರೆ ಕಾನೂನು ಬಹಳ ಕೆಟ್ಟದ್ದು ......" ಫೌಜದಾರ ಘರ್ಜಿಸಿದರು.

" ನಿಜ ನಿಜ ನೀವು ಹೇಳುವದು ಸತ್ಯ. ಆದರೆ ಫೌಜದಾರ ಸಾಹೇಬರೆ, ಸತ್ಯ ಮಾತು ಹೇಳಬೇಕೆಂದರೆ ...... ಇದನ್ನು ಆಳುಮಗ ನಿಂಗನೇ ತಂದವನು "

" ಹೀಗೋ ...... ಆ ಕೂಸು ಎಲ್ಲಿದ್ದಿತು ? "

ಆ ಹೊಲದ ಹೆಂಡೆಯ ಬದಿಯಲ್ಲಿ, ಕಿರುಚುತ್ತಿದ್ದಿತಂತೆ. ನಿಂಗನಿಗೆ ನೋಡಲಾಗದೆಯೇ ತಂದಿದ್ದಾನೆ. ”

“ ಸರಿ. ನಿಂಗನೆಲ್ಲಿದ್ದಾನೆ ? ” ಫೌಜದಾರ ಸಾಹೇಬರು ಹುಬ್ಬು ಗಂಟಿಕ್ಕಿ ಹಾಗೆಯೇ ಕುಳಿತು ಬಿಟ್ಟರು. ಬಿಂದೂರಾಯರು ನಿಂಗನನ್ನು ಕೂಗಿದರು.

“ ನಿಂಗಾ .

“ ನಿಂಗಾ

“ ಬಂದೆಯಪ್ಪಾ ........... ” ನಿಂಗ ಬಂದು ನಡುಗುತ್ತ ನಿಂತು ಕೊಂಡನು. ಫೌಜದಾರ ಸಾಹೇಬರು ನಿಂಗನನ್ನು ಬೆದರಿಸುತ್ತ,

“ನೀನೇಏನು ನಿಂಗಾ...?” ಎಂದರು. ನಿಂಗ ನಡುಗುತ್ತಿದ್ದ.

“ ಹೌದು ಬುದ್ಧೀ ”

“ ಸತ್ಯವಾಗಿ ಹೇಳಬೇಕು ತಿಳಿಯಿತೇ ! ”

“ ಆಗಲಿ ಶಿವಾ ....... ”

“ ನೀನು ಈ ಕೂಸಿನ ತಾಯಿಯನ್ನು ಏಕೆ ಮಾತನಾಡಿಸಿದಿ? ”

“ ಇಲ್ಲ ...... ಯಪ್ಪಾ ನಂಗೇನೂ ಗೊತ್ತಿಲ್ಲ ...... ”

“ ಹಾಗಾದರೆ ಈ ಕೂಸಿನ ತಾಯಿಯು ಮೊದಲು ಮಾತನಾಡಿಸಿದಳೇನು. ?

“ ಏನೂ ಗೊತ್ತಿಲ್ರಿ ಯಪ್ಪಾ ...... ”

“ ಅವಳನ್ನು ನೋಡಿದ್ದಾರೂ ನಿಜವೇ ? ”

“ ದೇವರಾಣಿ ಮಾಡಿ ಹೇಳ್ತನ್ರಿ ನನಗಾ ಹೆಣ್ಮಗಳು ಗೊತ್ತಿಲ್ಲ ”

“ ಸರಿ. ಈ ಕೂಸಾದರೂ ಗೊತ್ತಿದೆಯೋ ಇಲ್ಲವೋ.......?”

“ ಗೊತ್ತೈತ್ರಿ ”

“ ಹಾಗಾದರೆ ನಡುಗಬೇಡಾ ಸರಿಯಾಗಿ ಹೇಳು ... ”

“ ...... ಮುಂಜಾನೆದ್ದು ಹುಲ್ಲಿಗೆ ಹೋಗಿದ್ದಿನ್ರಿ. ನಮ್ಮ ದಣೇರ ಹೊಲ್ದಾಗ ಹೋರೀ ಕಟಿಗೆಂದು ಬಂದಿನ್ರಿ;

ಈ ಕೂಸು ...... ಅವಾಗ ಒದರ ತಿತ್ರಿ. ”

“ ಎಲ್ಲಿ ? ಯಾವಾಗ ? ” ಫೌಜದಾರ ಗಂಭೀರವಾಗಿ ಪ್ರಶ್ನಿಸಿದರು.

“ ನೋಡ್ರೀಯಪ್ಪಾ ......... ಹೋರೀ ಹೊತಗೊಂದು ಪೂಜಾರ ಬಸಪ್ನ ಹೊಲದಾಗ ಬರಬಕಾರ, ನೋಡಿದಿನ್ರೀ .........ಅಲ್ಲೆ ಬದೀನಾಗ ಇಟ್ಟು ಮೈಮ್ಯಾಗ ಹೆಂಡೀ ಹಾಕಿದ್ದರ್ರೀ ......”

ಹುಡುಗಾ ಒದರದss ಕೇಳಿ, ಅಲ್ಲೆ ಹೋದಿನ್ರಿ. ಅದರ ಮುಕಾ ನೋಡದಾಗಲಿಲ್ರಿ. ಮನೀಗೆ ತಂದೆ. ”

“ ಸರಿ ಆಗ ಎಷ್ಟು ಹೊತ್ತಾಗಿತ್ತು ”

“ ಮಧ್ಯಾಹ್ನಾಗಿತ್ರೀ ...... ” ಫೌಜದಾರರು ಗಂಭೀರವಾಗಿ ಎಲ್ಲವನ್ನು ಬರೆದುಕೊಂಡರು. ಕೊನೆಗೆ ನಿಂಗನನ್ನು ಕರೆದು ಎಡಗೈ ಹೆಬ್ಬೆರಳಿನ ಗುರುತು ಮಾಡಿಸಿಕೊಂಡು ಹೊರಗೆ ಹೋಗಲು ಅಣತಿಯನ್ನಿತ್ತರು. ನಿಂಗ “ ಶರಣೆಪ್ಪಾ .......”ಎನ್ನುತ್ತ ಹೊರಗೆ ಹೋದನು.

“ ಸರಿ ಬಿಂದೂರಾಯರೆ ಈಗ ಪಂಚನಾಮೆ ಮಾಡುವುದಾದರೂ ಹೇಗೆ ? ”

" ಪಂಚನಾಮೆ ಯಾಕೆ ಬೇಕು ಸಾಹೇಬರೇ ? ಯಾವುದೋ ಒಬ್ಬ ಲಗ್ನವಾಗದ ಹುಡಿಗಿ, ಕಳ್ಳತನದಿಂದ ಹಡೆದು, ಸಮಾಜಕ್ಕೆ ಹೆದರಿ,ಅಲ್ಲಿಯೇ ಇಟ್ಟು ಹೋಗಿರಬೇಕು. "

" ಸರಿ ನೀವು ಹೇಳುವುದೇನೋ ನಿಜ. ಆದರೆ ಕಾನೂನಿನ ಪ್ರಕಾರ ನಿಂಗ ಕೂಸನ್ನು ತರಬಾರದಿತ್ತು. ಸುಮ್ಮನೇ ಈಗ ತೊಂದರೆಯಾಗುತ್ತದೆ...... "

" ಛೀ ಛೀ ! ಹಾಗೆ ಮಾಡಬೇಡಿರಿ. ನನಗೂ ಮಕ್ಕಳಿಲ್ಲ. ಜೋಕೆ ಮಾಡುತ್ತೇನೆ. ಫೌಜದಾರ ಸಾಹೇಬರೇ ಈ ಕೂಸು ಒಂದು ಸಮಯ ಹೊಲದಲ್ಲಿಯೇ ಇದ್ದಿದ್ದರೆ, ಬಿಸಿಲಿಗೆ ಬಾಡಿಹೋಗುತ್ತಿತ್ತು. ಏನೋ ತಂದಿದ್ದಾನೆ.... "

" ಸರಿ. ಪ್ರಕರ್ಣ ಬೆಳೆದರೆ ಬಹಳೇ ತ್ರಾಸಾದೀತು ನಿಮಗೆ ಎಚ್ಚರಿಕೆ ಇರಲಿ. ನಿಮಗೆ ಈ ಕೂಸು ಸಿಕ್ಕೊಡನೆಯೇ ನಮಗೇಕೆ ತಿಳಿಸಲಿಲ್ಲ ?"

"ಏನೋ ಸ್ವಲ್ಪ ಚೂಕೀ ಆಯಿತೆನ್ನಿರಿ. ಇರಲಿ ಇದೊಂದು ಸಲ ಕ್ಷಮಿಸಿ ಬಿಡಿರಿ ............ " ಆಗ ಫೌಜದಾರ ಸಾಹೇಬರು ಮುಂದೊಡ್ಡಿದ ಕೈಯಲ್ಲಿ ನೋಟಿನ ಸುರುಳಿ ಬಿದ್ದಿತು.

" ಸರಿ ಮುಂದೆ ವಿಚಾರಿಸುವಾ ........... " ಎಂದವರೇ ಎದ್ದ ಹೊರಟರು.

ಬಿಂದೂರಾಯರಿಗೆ ಎದೆ ಭಾರ ಇಳಿದಂತಾಯಿತು. "ಎಲ್ಲಿ ಖಟ್ಲೆ ಯಾಗುವದೋ................. " ಎಂದು ಭಯ ಭೀತರಾಗಿದ್ದರು. ಆದರೆ ಫೌಜದಾರ ಸಾಹೇಬರು ನೋಟಿನ ಸುರುಳಿಗೆ ಮರುಳಾಗಿ ......... " ವಿಚಾರಿಸುವಾ " ಎಂದು ಹೋಗಿ ಬಿಟ್ಟರು......... ಲಂಚದ ಮಿಂಚಿನಿಂದ ಸಸುನಳ್ಳು ಹೊರಟುಹೋದರು.

ಅದೇ ದಿನ ನಿಂಗ ಬಿಂದೂರಾಯರ ಹೊಲದಿಂದ ಬರುವಾಗ ಹುಲ್ಲಿನ ಹೊರೆಯನ್ನು ತರಲಿಲ್ಲ. ಮಕ್ಕಳಿಲ್ಲದ ರಾಯರ ಬಾಳಿನ ಬೆಳಕನ್ನೇ ತಂದನು.

ರಾಯರು ನಿಂಗನಿಗೆ ಕೃತಜ್ಞತೆಯನ್ನು ಸಲ್ಲಿಸಿ, ಸಾವಿರಾರು ಸಲ "ಭಲೆ ...... ನಿಂಗಾ ......" ಎಂದರಲ್ಲದೆ ಅವನ ಮೈ ಮೇಲೆ ಸಾವರಿಸುತ್ತ "ನಿನ್ನಿಂದ ಉಪಕಾರವಾಯಿತು" ಎಂದರು !

ನಿಂಗ ಹೊಲದಿಂದ ಹೊರಟಾಗ ಬಿಸಿಲಿನ ತಾಪ ಹೆಚ್ಚಿತ್ತು; ಆದರೂ ಮಣ್ಣಿನ ಮಗ ಹೇಗೆ ಸುಮ್ಮನೇ ಬರುವದಾಗುತ್ತದೆ ?

ಸುತ್ತಲೂ ನೋಟದ ಜಾಲವನ್ನು ಎಸೆದು, ಗೌಡರ ಗೋದಿಯ ಹೊಲದ ತೆನೆಯನ್ನು ನೋಡಿಕೊಂಡು, ಬಿಂದೂರಾಯರ ತೆಗ್ಗಿನ ಹೊಲದ ಕಡಲೆಯನ್ನು ಹಿಚುಕಿನೋಡಿ, ಪಾತಮ್ಮನ ಸವತೆಬಳ್ಳಿಯ ಹೊಲದಲ್ಲಿ ತಿರುಗಾಡಿ, ಮರಳಿ ಬಂದಿತು ಅವನ ಮನಸ್ಸು ! ಮತ್ತೆ ಹುಲ್ಲಿನ ಹೊರೆಯನ್ನು ಹೊತ್ತುಕೊಂಡು ಬರುವಾಗ ಪೂಜಾರ ಬಸಪ್ಪನ ಹೊಲದ ಬದಿಯಲ್ಲಿ ಬೆಚ್ಚಿಕೊಂಡು ನಿಂತ. ಅವನಿಗೆ ಒಮ್ಮೆ ತಾಯಿ ಪೃಥ್ವಿನಿಯು ಮುಳಿಸಿದಂತಾಯಿತು ! ಭೂಮಿ ತಾಯಿಯೂ ಬಿಸಿಲಿಗೆ ಬಳಲಿ ಆಕಳಿಸಿದಂತಾಯಿತು. ಮತ್ತೆ ಹೃದಯದ್ರಾವಕವಾದ ಕನಿಕರದ ಸ್ವರವೊಂದು ಕೇಳಿಬಂದಿತು. ಅದು ಮಧುರವಾಗಿದ್ದರೂ — ಕರ್ಕಶಕ್ಕಿಳಿದಿತ್ತು. ಆ ಸ್ವರವನ್ನು ಕೇಳಿ ಹುಲ್ಲಿನ ಹೊರೆಗೆ ಸಹಿಸಲಾಗಲಿಲ್ಲ. ನಿಂಗನ ತಲೆಯಿಂದ ನೆಲಕ್ಕುರುಳಿತು. ಗೋಡೆಗೆ ಪುಟಿಸಿದ ಚಂಡು, ಹಿನ್ನೆಗೆದು ಬರುವಂತೆ ನಿಂಗ, ಧ್ವನಿಹೊರಡುವ ತಾಣವನ್ನೇ ಗುರುತಿಸಿದ.

ಹೊಲದ ಹೆಂಟೆಗಳ ತೋಳ ಸೆರೆಯಲ್ಲಿ ಮಲಗಿದ ಶಿಸುವು ಬಿಸಿಲು ಹಣ್ಣು ತಿಂದು, ಉಸುರಾಡಿಸುತ್ತಿದ್ದಿತು. ನಿಷ್ಕರುಣನಾದ ದಿನಪನು ತನ್ನ ಕೆಂಡದಂತಹ ಕಿರಣಗಳನ್ನು ಆ ಕೂಸಿನ ಮೇಲೆ ಪ್ರಯೋಗಿಸುತ್ತಿದ್ದನು. ಬಿಸಿಲುಗುದುರೆಗಳು ದಿಕ್ಕು ದಿಕ್ಕುಗಳಲ್ಲಿ ಸಂಚರಿಸುತ್ತಿದ್ದವು. ಮಗುವು ಬಿಸಿಲಿಗೆ ಬಾಯಿ ತೆಗೆದು "ಉವ್ ಉವ್" ಎಂದು ಒದರುತ್ತಿತ್ತು..

ಎಷ್ಟಾದರೂ ಹೆಣ್ಣು ಹೃದಯ ಮೇಲು. ಅಂತೆಯೇ ದಿಗಂಗನೆ ಯರು "ಆಹಾ! ಹಸುಗೂಸು!!" ಎಂದು ನಿಂತಲ್ಲಿಯೇ ನಿಂತು ಬಿಡುಗಣ್ಣ ಬಾಲಿಕೆಯರಾಗಿದ್ದರು. ಕೂಸು ................ ಅಲ್ಲ. ಪಾಪದ ಪಿಂಡ! ತಾಯ್ತನದ ಬಂಧನಕ್ಕೆ ಮಗುವಾಗಿದೆ; ತಾಯಿಯ ಅನಾಚಾರ, ಅತ್ಯಾಚಾರದ, ಪ್ರತಿಫಲವಾಗಿದೆ. ಸಮಾಜದ ಕಟ್ಟುನಿಟ್ಟು ಗಳಿಗೆ ಮನಸೋತ ನರರಾಕ್ಷಸಿಯ ಹೆಸರು ಹೇಳುತ್ತಿದೆ. ತಾಯಿಯು ಮುಚ್ಚು ಮರೆಯಲ್ಲಿ ಪಾಪ ಕೃತ್ಯವನ್ನು ಎಸಗಿ, ಬಾಹ್ಯಕ್ಕೆ ಒಳ್ಳೆಯತನದ ಸೋಗು ಹಾಕಿಕೊಳ್ಳಲೆತ್ನಿಸಿದ್ದರೂ, ಆ ಕೂಸು ಪ್ರಪಂಚಕ್ಕೇನೇ ಪಾಪದ ಪ್ರದರ್ಶನವನ್ನೇರ್ಪಡಿದೆ !

ನಿಂಗನಿಗೆ ನೋಡಲು ಆಗಲಿಲ್ಲ. ಕ್ಷಣಕಾಲ ಎಲ್ಲಿಯೋ ಜೀವಿಸಿದ್ದರೂ ಮರಳಿ ಮಗುವಿನೆದಿರು ನಿಂತ.

ಆ ಸ್ಥಳಕ್ಕೆ ಅಂದಿನ ಬೆಳಗಿನ ಸಮಯಕ್ಕೆ ಆ ಕೂಸು ಬಂದಿದ್ದರೂ ಯಾರು ನೋಡಿರಲಿಲ್ಲ. ಕರುಳಿಲ್ಲದ ತಾಯಿ ತಂದಿಟ್ಟಿದ್ದಾಳೆ. ಯಾವ ಜನ್ಮದ ಕರ್ಮವನ್ನೋ ಈ ಕೂಸು ಅನುಭವಿಸುತ್ತಿದೆ. ನಿಂಗನ ತಲೆಕಾದಿತು. ನೋಡುವ ಕಣ್ಣುಗಳೂ ಕತ್ತಲೆಯನ್ನು ಕುಡಿಯಲಾರಂಭಿಸಿದವು. "ಆಹಾ ! ಯಾರದು ? ನಾನು ತೆಗೆದುಕೊಂಡರಾಯಿತು... ಯಾರಾದರೂ ನೋಡಿದರೆ ಛೀ ! ಏನಾದರೂ ಬಂದೀತು......... ಬರಲಿ. ಬಂದರೇನಾಯಿತು? ಛೀ ! .......ಛೀ ! ಬೇಡ ...... ಅಯ್ಯೋ ! ಬಿಸಲಿಗೆ ಬಳಲುವದಲ್ಲಾ......" ಅಂತೂ ಕೊನೆಗೆ ನಿಂಗ ಕೂಸನ್ನೆತ್ತಿದ. ಹುಲ್ಲಿನ ಹೊರೆ ದುಃಖ ಭಾರದಿಂದ ನೆಲವನ್ನು ಹಿಡಿಯಿತು. ನಿಂಗ ಮುಂದೆ ಸಾಗಿದ. ನೇರವಾಗಿ ಬಂದು ಬಿಂದೂ ರಾಯರಿಗೆ ಕೊಟ್ಟ. ಒಡೆಯನಿಗೆ ಕೃತಜ್ಞತೆಯನ್ನು ಸಲ್ಲಿಸಿದ. ಪುತ್ರಾರ್ಪಣೆ ಮಾಡಿದ. ಆದರೆ ......... ? ಆವನ ಹುಲ್ಲಿನ ಹೊರೆಯು ಈ ಜಗತ್ತಿನಲ್ಲಿ ನಡೆಯುತ್ತಿರುವ ಅನ್ಯಾಯ, ಅಸತ್ಯಕ್ಕಾಗಿ ಕೊರಗಿ, ಮರುಗಿ, ಆ ಹೊಲದ ಲ್ಲಿಯೇ ಪ್ರಾಣಬಿಟ್ಟಿತು !

(೨)

ಬಿಂದೂರಾಯರ ಜೀವನದಲ್ಲಿ ಈಗೊಂದು ತೆರನಾದ ಬೆಳಕು ಮೂಡಿ ನಿಂತಿದೆ. ಕುಪ್ಪಮ್ಮನ ಬಾನಂಗಳದಲ್ಲಿ ಪೂರ್ಣ ಕಲೆಯ ಚಂದ್ರನುರಿಸಿ, ಹಾಲು ಬೆಳದಿಂಗಳನ್ನು ಹರಿಸಿದ್ದಾನೆ. ರಾಯರ ಬಾಳುವೆ ಕುಮುದವಾಗಿ ಅರ ಳುತ್ತಿದೆ; ಸುತ್ತಲೂ ಸೌರಭ ಸೂಸುತ್ತಿದೆ. ಹರ್ಷದ ತುಂಬಿಗಳು ಎರೆದುಂಬಿ ಝೇಂಕಾರ ಗೈಯುತ್ತಿವೆ.

ಮಕ್ಕಳಿಲ್ಲದ ಕೊರಗೀಗ ಮಣ್ಣುಪಾಲಾಯಿತು. ಆ ಕೊರಗೇ ಹೂಸಾಗಿ ಮಣ್ಣಿನಲ್ಲಿ ಉದಿಸಿತೇನೊ !

ಬಾಲಚಂದ್ರನೀಗ ಜಾರಿಣಿಯ ಮಗನಲ್ಲ. ಬಿಂದೂರಾಯರ ಹಾಗೂ ಕುಪ್ಪನಮ್ಮವರ ಮಗ— ಮುದ್ದಿನ ಖಣಿ, ಬಂಗಾರಗಟ್ಟಿ. ನಾಲ್ಕು ವರ್ಷದ ಮಗು ಕಾಲು ಬಿಚ್ಚಿ ಅಡ್ಡಾಡಿದರೆ ಯಾರಿಗೆ ತಾನೆ ಹರ್ಷವಾಗಲಿಕ್ಕಿಲ್ಲ? ಯಾರ ಕಲ್ಲು ಹೃದಯವೂ ಕರಗಬೇಕು. ಮಕ್ಕಳನ್ನು ಕಾಣದ ಮುನ್ನ ಸೀತಾದೇವಿಯು ಶ್ರೀರಾಮನೆದುರಿಗೆ ಬಾಲಲೀಲೆ ಜೋಲ್ದೊರೆವಹಾರ, ನಳಿದೋಳು, ಮುದ್ದಿನ ಮುದ್ದೆ ಎಂದು ಸಂಭೋದಿಸಿ ಹಾಡಿದ ಹಾಡು,ಬಯ ಸಿದ ಬಯಕೆ ಬಿಂದೂರಾಯರ ಜೀವನದಲ್ಲಿಯೂ ಮೊದಲು ಘಟಿಸಿದ್ದಿತು. ಆದರೆ ಈಗ-ಅನುಭವಿಸುತ್ತಿದ್ದಾರೆ....ಅವರಿಗೀಗ ಕೈಲಾಸ ಮೂರು ಗೇಣು !

ಆದರೇನು ...... ?

ಈ ಅಮೃತಗಳಿಗೆಯನ್ನು ಅನುಭವಿಸಲು ಈಗ ನಿಂಗನಿಲ್ಲ. ಸರ್ಪ ಕಚ್ಚಿದ ನೆವದಿಂದ ಕಾಲವಾಗಿದ್ದಾನೆ. ಅವನಿದ್ದಿದ್ದರೆ ಇದಕ್ಕೂ ಮೆರುಗು !

ನಿಂಗನ ಹೆಂಡತಿ ಪಾರಿ, ಅವನ ಮಗ ಹನುಮ, ಬಿಂದೂರಾಯರ ಮನೆಯಲ್ಲಿಯೇ ಇದ್ದಾರೆ ನಿಂಗ ಸಲ್ಲಿಸಿದ ಹದಿನಾರು ವರ್ಷದ ಸೇವೆಗಾಗಿ ರಾಯರು ಮನಸೋತು,ಅವನ ಹೆಂಡರು ಮಕ್ಕಳನ್ನು ಕೈ ಬಿಡಲಿಲ್ಲ.

ಪಾರಿ ಮನೆಗೆಲಸವನ್ನು ಪೂರೈಸಿ, ಆಳುಗಳನ್ನು ಕರೆದುಕೊಂಡು ಹೊಲಕ್ಕೆ ಹೋಗುತ್ತಾಳೆ. ಹನುಮ ಇನ್ನೂ ಸಣ್ಣ ಹುಡುಗ. ಕಳೆದಕಾರ ಹುಣ್ಣಿಮೆಗೆ ಮೂರರಲ್ಲಿ ಬದ್ದಿತ್ತು. ತಾಯಿ ಹೊಲಕ್ಕೆ ಹೋದರೆ ಹನುಮ ಬಾಲಚಂದ್ರನ ಬಳಿಯಲ್ಲಿ ಆಡುತ್ತಾನೆ. ಅವನು ಉಣ್ಣುವದನ್ನು ಉಂಡು ಆಡುವದನ್ನು ಆಡುತ್ತಾನೆ. ಅಣ್ಣ ತಮ್ಮರಂತೆ ಬಾಲಚಂದ್ರ— ಹನುಮರು ಕೂಡಿಕೊಂಡರು. ಒಬ್ಬರನ್ನೊಬ್ಬರು ಅಗಲುವಹಾಗಿಲ್ಲ. ಆದರೇನು ......? ರಾತ್ರಿಯಾದರೆ ಹನುಮ ತಾಯಿಯ ತೋಳ ಲೆಕ್ಕೆಯಲ್ಲಿ ಮಲಗಬೇಕು. ಬಾಲಚಂದ್ರ ಮೆತ್ತನೆಯ ಹಾಸಿಗೆಯ ಮೇಲೆ ಮಲಗಿದ ತಂದೆ ತಾಯಿಗಳ ಬಳಿಯಲ್ಲಿ ಮಲಗಬೇಕು. ಹೀಗೆಯೇ ಕಾಲ ಕಳೆದವು. ರಸ ನಿಮಿಷ ಜಾರಿದವು. ಮತ್ತೆ ಒಂದು ವರ್ಷ ತುಂಬಿಹೋಯಿತು.

ಪಾರಿಗೀಗ ರಾಯರ ಮೇಲೆ ತಾತ್ಸಾರ ಭಾವನೆಯುಂಟಾಗಿದೆ. ಎಷ್ಟು ದುಡಿದರೂ ಅಷ್ಟೇ. ನಮಗೇನು ಬರಬೇಕಾಗಿದೆ? ಯಾರಿಗೆ ಬೇಕು ಈ ಕತ್ತೆಯ ಕೆಲಸ! ನಾವು ಬಂದು ನಾಲ್ಕುವರ್ಷವಾದರೂ ಒಂದು ಒಳ್ಳೆಯ ಸೀರೆಯಿಲ್ಲ. ತೇರು—ಜಾತ್ರೆ— ಹಬ್ಬ ಹುಣ್ಣಿಮೆಗಳೆನ್ನುವವೇನು ಚಂದಕಿವೆಯೇ ? ಮೊನ್ನಿನ ಜಾತ್ರೆಗೆ ಹೆಂಡತಿಗೆಂದು ರೇಶ್ಮೆಯ ಶೀರೆ ತಂದ...... ನನಗೆ? ಹೀಗೆಖಿನ್ನ ಮನಸ್ಕಳಾದಳು. ದುಡಿಮೆಯಲ್ಲಿ ಕಳ್ಳತನದ ಪ್ರಯೋಗ ನಡೆಸಿದಳು. ಇದ್ದದುದನ್ನು ಇದ್ದಲ್ಲಿಯೇ ಮಾಯಮಾಡುವದನ್ನು ಸಾಧಿಸಿದಳು. ಮುಖ್ಯವಾಗಿ ಅವಳಿಗೆ ಈ ತೆರನಾದ ಭಾವನೆ ಬರಲು ಮತ್ತೊಂದು ಕಾರಣವಿದೆ.

ಬಾಲಚಂದ್ರನ " ಜವಳಾ " ತೆಗೆಯಿಸುವಾಗ ನಡೆದ ಸಂಭ್ರಮದ ಸುಗ್ಗಿ ! ಊರ ನೂರಾರು ಜನರನ್ನು ಕೂಡಿಕೊಂಡು, ಬಿಂದೂರಾಯರು ಬಾದಾಮಿಗೆ ಹೋಗಿ ಬಂದಿದ್ದರು. ಮಗನ ಜವಳದ ಕಾರ್ಯಕ್ಕೆ ಸುಮಾರು ಸಾವಿರು ರೂಪಾಯಿ ಖರ್ಚು ಮಾಡಿದ್ದರು. ಆದರೆ ? ......? ಹನುಮನ ಜವಳಾ ....... ? ಅದೇ ಅವಳಿಗೆ ಮಹಾ ಸಿಟ್ಟು ! ರಾಯರು ಸ್ವಾರ್ಥಿಗಳೆಂದು ಮೂದಲಿಸಿದಳು. ಪಾಪ! ಅವಳಿಗೇನುಗೊತ್ತು? ಜಗತ್ತು ಸ್ವಾರ್ಥದ ಕವರು ಮನೆ ಎಂಬುದು!

ಇತ್ತೀತ್ತಲಾಗಿ ರಾಯರು ಬಾಲಚಂದ್ರನನ್ನು ಹನುಮನೊಡನೆ ಆಟಕ್ಕೆ ಬಿಡುತ್ತಿರಲಿಲ್ಲ. ಅವನಿಗಾಗಿಯೇ ಕುಪ್ಪಮ್ಮ ನಡುಕಟ್ಟಿಕೊಂಡು ನಿಂತಿದ್ದಳು.

ಹನುಮನು ಹೊಲಸು ಬಟ್ಟೆಗಳನ್ನು ಹಾಕಿಕೊಂಡು "ಅವ್ವಾ ಅವ್ವಾ" ಎನ್ನುತ್ತ ಬಿಸಿಲಿನ ಹೊಲದಲ್ಲಿ ಅವಳ ಬೆನ್ನು ಹಿಡಿದು ತಿರುಗಾಡುವದನ್ನು ನೋಡಿ ಪಾರಿಗೆ ಸಂಕಟವಾಗುತ್ತಿತ್ತು. ಬರಿಗಾಲಿನಿಂದ, ಬರಿನೆತ್ತಿಯಿಂದ ಬಿಸಿಲಿನಲ್ಲಿ, ಹುಡಿಯಲ್ಲಿ ನರಳುವದನ್ನು ನೋಡಿ, ಕರುಳು ಕಿವುಚಿದವು. ಕಣ್ಣೀರುಗಳು ಕಪೋಲಗಳನ್ನು ನೆನೆಯಿಸುತ್ತಿದ್ದವು. ಹೊದ್ದ ಸೆರಗು ಮುಂದೆ ಬಂದು ತಾನೂ ಆ ಕಣ್ಣೀರನ್ನು ಕುಡಿದು,ತಣ್ಣಗಾಗುತ್ತಿತ್ತು. ಬಾಲಚಂದ್ರ ಬಿದಿಗೆಯ ಚಂದ್ರನಂತೆ ಬೆಳಗುತ್ತಿದ್ದುದು ಅವಳ ಅಂತರಂಗಕ್ಕೆ ಒಪ್ಪಲಿಲ್ಲ.ಆಗಾಗ ಅಸೂಯೆ ತಲೆ ಎತ್ತುತ್ತಿತ್ತು. ಮನಸ್ಸಿನ ಮೇಲೆ ಕಪ್ಪು ಮೋಡಗಳು ಕವಿಯಲಾರಂಭಿಸಿದವು.

ತನ್ನ ಮಗನಿಗೆ ಸುಖ ದೊರೆಯಬೇಕು...... ನಿಜ. ಬಗೆ ಹೇಗೆ ? ...... ಅಸಾಧ್ಯ. ರಾಯರ ಮನೆಯಲ್ಲಿ ಬಾಲಚಂದ್ರನಿರುವ ವರೆಗೆ ...... ಮಗನ ಸುಖಕ್ಕೆ ತಿಲಾಂಜಲಿ. ಅದಕ್ಕೆ ಎಳ್ಳೂ, ನೀರೂ ಸಿದ್ಧವೇ ! ಕೊಲ್ಲುವ ಹಂಚಿಕೆ ಹಾಕಿದಳು, ಸಾಧ್ಯವಾಗಲಿಲ್ಲ. ಕೆಡಿಸುವ ಹಂಚಿಕೆಯಲ್ಲಿ ತತ್ಪರಳಾದಳು. ಮನೆಯವರೆದುರು ಸಭ್ಯ ರೀತಿಯ ನರ್ತನೆ ಗೈದು,ಅವರು ಮರೆಯಾದಾಗ ಕ್ರೂರ ಕಠೋರ ಪಾತ್ರವಹಿಸುವಳು. ಅವನಿಗಾಗಿ ಹಾಲು ಕಾಯುತ್ತಿದ್ದರೆ. ಉಪ್ಪು ಬೆರೆಸುವಳು. 'ಅನ್ನ'ಅಣಿಯಾಗಿದ್ದರೆ, ಹರಳು ಬೆರೆಸುವಳು, ಅಯ್ಯೋ ! ಏನಿದನ್ಯಾಯ! ಅವಳ ಹೃದಯವೇ ಪರಿವರ್ತನೆಯಾಯಿತು. ಎಲ್ಲಿಯದೋ ಬಂದು ಇಲ್ಲಿ ನೆಲಸಿದೆ.ಯಾವ ಜಾರಿಣಿಯ ಮಗನೋ ಇದಕ್ಕೆ ಇಲ್ಲಿ ಇಂದ್ರ ಪಟ್ಟ !

ಎಷ್ಟೋ ಯೋಜನೆಗಳನ್ನು ಗೈಯುತ್ತಲೇ ಇದ್ದಳು. ತನ್ನ ಭಾವನೆಯಂತೆಯೇ ಹನುಮನನ್ನು ಮಾರ್ಪಡಿಸಿಕೊಂಡಳು. ಹನುಮನು ಅವನ ಆಟಿಕೆಗಳನ್ನು ಕೆಡಿಸುವನು. ಕಾಣದಾದಾಗ ಮುರಿಯುವನು. ಹೊಲಸು

ಹಚ್ಚುವನು. ಒಂದೊಂದು ದಿನ ಆ ಸಾಮಾನುಗಳನ್ನು ಹೊತ್ತುಕೊಂಡು ಹೋಗಿ ಬಾವಿಯಲ್ಲಿ ಚೆಲ್ಲುವನು. ಪಾಪ! ಚಂದ್ರನಿಗೇನು ಗೊತ್ತು? ರಾಯರಿಗೇನು ಗೊತ್ತು ? ಮರವೇ ಫಲವನ್ನು ನುಗಿಂದರೆ ಯಾರು ಗುರುತಿಸ ಬಲ್ಲರು ?

## (೩)

ಬಾಲಚಂದ್ರನೀಗ ಮರಣೋನ್ಮುಖನಾಗಿ ಮಲಗಿದ್ದಾನೆ.

ಕಾಂತಿಯುತವಾಗಿದ್ದ ಮುಖವನ್ನು, ಮ್ಲಾನವು ತನ್ನದನ್ನಾಗಿ ಮಾಡಿಕೊಂಡಿತು. ಹಿಂಜಿದರಳೆಯ ಮೋಡ ಪಡೆಗೆ, ಕಾಳರಾತ್ರಿಯ ಕಪ್ಪು ತೇಪಿತವಾದಂತೆ ಮೈ ಬಣ್ಣವಾಯಿತು. ರಕ್ತವು ಶಾಮ ವರ್ಣವಾಗಿದೆ. ಹಲ್ಲುಗಳು ಕಿರುಚಿಕೊಂಡು, ಹಾಬುಗಲ್ಲಗಳು ಒಳಸೇರಿವೆ. ಬಾಲಚಂದ್ರನು ಜೀವಂತವಿರುವನೆಂದು ಹೇಳಬೇಕಾದರೆ ಕಣ್ಣುಗಳನ್ನು ನೋಡಿಯೇ ! ಕಣ್ಣಲ್ಲಿ ಜೀವ ನೆಲಿಸಿದೆ. ದೇಹ ಮರಣದ ಶಯ್ಯೆಯ ಮೇಲೆ ವಿಶ್ರಮಿಸಿದೆ. "ಈ ಲೋಕದಿಂದ ಜಾರುತ್ತೇನೆ" ಎಂನು ಮೌನವಾಗಿ ಅವನ ನೋಟಗಳು ಸಾರುತ್ತವೆ ಮಗ್ಗುಲಲ್ಲಿ ಹಣ್ಣಿನ ಹೋಳುಗಳು ಮುಖ ಒಣಗಿಸಿಕೊಂಡಿವೆ, ಸುತ್ತಲೂ ನೊಣಗಳು ಅಶುಭರಾಗದಿಂದ ಹಾಡುತ್ತಿವೆ, ಕುಪ್ಪಮ್ಮ ಮಗನ ಮಗ್ಗುಲಲ್ಲಿ ಕುಳಿತಿದ್ದಾಳೆ, ಹೇಳಿದ ಹತ್ತಾರು ಡಾಕ್ಟರರ ನಿರಾಶಾ ಉತ್ತರಗಳನ್ನು ನೆನೆನೆನೆದು ನಿಡಿದಾದಉಸಿರುಗಳನ್ನು ಬಿಡುತ್ತಾಳೆ. ಈ ಸಮಯದಲ್ಲಿ ಪಾರಿಯಿದ್ದಿದ್ದರೆ, ಒಂದು ಕೋಲಾಹಲವೇ ಏಳುತ್ತಿತ್ತು. ಹದ್ದು ಕಾಗೆಗಳು ಸತ್ತ ಪ್ರಾಣಿಯನ್ನು ತಿನ್ನುವಂತೆ ಬಿಂದುರಾಯರೂ ಕುಪ್ಪಮ್ಮನೂ ಅವಳನ್ನು ತಿನ್ನುತ್ತಿದ್ದರೇನೊ !

ವೈದ್ಯರ ಅಭಿಪ್ರಾಯದಂತೆ ಪಾರಿ ಬಾಲಚಂದ್ರನಿಗೆ ಮಾಟಿಯನ್ನು ಮಾಡಿಸಿದ್ದಾಳೆ. ದಿನ ದಿನವೂ ಕೊರಗಿ ಕೈಕಾಲುಗಳು ಸಣ್ಣಗಾಗಿ, ರಕ್ತದ

ಶ್ರವಣ ದೇಹದಿಂದ ಆಗುವಂತೆ ಮಾಡಿಸಿದ್ದಾಳೆ. ಅದಕ್ಕೆಂತಲೇ ಅವಳು ಶೌರಿನನೆವ ಮುಂದೆಮಾಡಿ ಮೆಲ್ಲನೇ ಜಾರಿದ್ದಳು. ನಾಲ್ಕು ತಿಂಗಳಾದರೂ ಬರಲಿಲ್ಲ. ಬರುವ ಭರವಶೆ ಇಲ್ಲ.

"ಹೋದಳು......ನರರಾಕ್ಷಸಿ ಅಯ್ಯೋ! ಚಂಡಾಲಿಸಿ. ನನ್ನ ಮಗ ನನ್ನು ಬಲಿತೆಗೆದುಕೊಂಡಿ.......ಪಾರೀ ...... ಬೆಳುದಿಂಗಳು ಬಿಸಿಲೆಂದು ಭಾವಿಸಿದೆಯಾ? ಹಾಯ್ ಬಾಲಚಂದ್ರ, ನೀನಿನ್ನು ಮರೆಯಾಗುವೆಯಾ?" ಎಂದುರೋಧಿಸಿ, ಬಿಂದೂರಾಯರು ಚಂದ್ರನ ಮುಖ ಮುಟ್ಟಿ ಅಲುಗಾಡಿಸಿದರು. ಚಂದ್ರ ಅಲುಗಾಡಬಲ್ಲನೇ .........? ತಣ್ಣಗಾದನು. ಮಣ್ಣಿನ ಮಗನನ್ನು ಮಣ್ಣಿಗೆ ಕಳಿಸುವ ಪ್ರಸಂಗ ಬಂದಿತು.

ಬಿಂದೂರಾಯರದು ಬರಿಯ ಬಂಜೆಗನಸಾಯಿತು.

ಬಾಲಚಂದ್ರನು ಬಂದ ತಾಣಕ್ಕೇನೇ ಹೋದನು. ರಾಯರನ್ನು ಸಂತೈಸಲು ಬಂದ ನೂರಾರು ಜನರು, ದುಃಖ ಗೀತೆಯನ್ನು ಹಾಡಿದರು. ಕಣ್ಣೀರಿನಿಂದ ಮುಖ ತೊಳೆದುಕೊಂಡರು!

ಚಂದ್ರನ ಆತ್ಮವನ್ನು ಪೂಜಾರ ಹೊಲವು ಬಯಸಿತು. ತನ್ನೆಡೆಲಿ ನಲ್ಲಿಯೇ ಇಡಲು ಹಟಹಿಡಿಯಿತು. ಜನರೆಲ್ಲ ಚಂದ್ರನನ್ನೊಳಗೊಂಡು ಅಲ್ಲಿಗೇನೆ ಹೋದರು. ಕುಪ್ಪವ್ವ ಬಿಂದೂರಾಯರನ್ನು ಕೆಲವರು ಹಿಡಿದುಕೊಂಡಿದ್ದರು. ಚಂದ್ರ ತಾನು ಮೊದಲು ಶಿಶು ಇದ್ದಾಗ ಮಲಗಿದ ಸ್ಥಾನವನ್ನು ಆಕ್ರಮಿಸಿದ. ಭೂಮಿತಾಯಿಯೂ ಜನರಂತೆ ಬೋರಿಟ್ಟಳು. ಕೊನೆಗೆ ಉಡಿಯಲ್ಲಿ ಹಾಕಿಕೊಂಡು ಮುದುಡಿಕೊಂಡಳು. ಬಂದವರೆಲ್ಲ ಚಂದ್ರನನ್ನು ಕಾಣದಾದರು. ಮನೆಗೆ ಮರಳಿದರು. ಆದರೆ ......? ಬಿಂದೂರಾಯರು ಮಗನನ್ನು ಕೂಗುತ್ತ ಅಲ್ಲಿಯೇ ಕುಳಿತರು. ಚಂದ್ರನು ಮನೆಯಲ್ಲಿರುವನೋ ...... ಮಣ್ಣಿನಲ್ಲಿರುವನೋ? ಎಂಬ ಪ್ರಶ್ನೆಯೊಂದೇ ಅಲ್ಲಿ ಸುಳಿದಾಡುತ್ತಿದ್ದಿತು.

---

# ಸತಿಯಲ್ಲ ಸೂಳೆ.....!

Life has become richer by the love
that has been lost.

*Rabindranath Tagore*

ನನ್ನಿಂದ ಅವರಿಗೆ ಅನ್ಯಾಯವಾಗಿದೆ. ಆದರೂ ......... ಅವರು ಕ್ಷಮಿಸಬಹುದೇ? ಕ್ಷಮಿಸಬಹುದು. ಛೀ! ಅನ್ಯಾಯ ....... ನನ್ನಿಂದಲೇ ಅವರ ಜೀವನಕ್ಕೆ ಕಪ್ಪುಕಲೆ. ಆ ಎಲ್ಲ ದುರ್ಘಟನೆಗೂ ......? ಅಹುದು. ಅವರು ಹಾಳಾದುದಕ್ಕೆ ನಾನೇ ಮೂಲಕಾರಣೀ ಭೂತಳು ............! ನಾನಲ್ಲ! ಜಾತ್ಯಾಂಧತೆಯ ಮಬ್ಬು, ನಮ್ಮನ್ನು ಮುಸುಕಿತು. ಕೀಳು, ಹಾಳು ಸಮಾಜವೇ ನಮ್ಮನ್ನಗಲಿಸಿ, ವಿರಹಾಗ್ನಿಗೆ ನೂಕಿತು. ಛೀ! ಅಲ್ಲ. ತಂದೆ ...... ತಾಯಿಗಳ ಮಾಯಾಮೋಹ! ಅದುವೇ ನನ್ನ ಅಚಲ ಹೃದಯದಲ್ಲಿ ಶೈಥಿಲ್ಯವನ್ನು ಹುಟ್ಟಿಸಿತು. ಅದರ ಜೊತೆಗೆ ಜಾತಿಯ ಭೂತವು ಗುಡುಗು ...... ಮಿಂಚುಗಳ ಘರ್ಜನೆಗೈಯಿತು. ವಿಚಾರ ತಾಕಲಾಟಕ್ಕೆ ಆತ್ಮ ಅಲುಗಿತು. ನೈರಾಶ್ಯದ ಬಿಸಿಲು ಗೋಲುಗಳೇ ನನ್ನನ್ನು ವಿಪರೀತ

ಭಾವನೆಗೆ ಮಾರ್ಪಡಿಸಿಕೊಂಡವು ......ಅಲ್ಲ. ಯಾರ ತಪ್ಪೂ ಅಲ್ಲ...... ನನ್ನದೇ ನಾನೇ ...... ನಾನೇ ...... ಮೊದಲು ನಾನೇ ಕೆಂಡಕ್ಕೆ ಕೈ ಹಾಕಿದೆ. ಥೂ! ಹುಚ್ಚು ವಿಚಾರವೇ! ಕೆಂಡವಲ್ಲ, ಅವರು ರತ್ನದ ಖನಿ! ಅವರ ಹೃದಯ? ಅಮೃತ ಕಲಶ. ...... ಮಾತು? ಮುತ್ತಿನ ಮಳೆ ... ...... ದೇಹ? ...... ಸಾನಂದ ಸುಂದರ ......... ಅಹಾ! ಕೊರಲ ವೀಣೆ? ಮೃದು ಮಧುರ! ಗಾನ ಕೋಕಿಲೆ! ಸುಮ್ಮನೇ ಕುಳಿತಿರಲ್ಲ? ನಿನ್ನೆ ಹೇಳಿದ ಹಾಡು ಹೇಳಿರಿ ಹೂಂ. ಹೇಳುವದಿಲ್ಲವೇ? ಹೇಳದಿದ್ದರೆ ವೀಣೆ ಯನ್ನೇ ಒಡೆದು, ಓಡಿ ಹೋಗುವೆ. ಹೂಂ... ಹೂಂ.... ಹೂಂ....

ಛೆ! ನಾನೆಂಥ ಹುಚ್ಚಿ? ಅವರಿಲ್ಲಿಲ್ಲ. ಇದು ಅವರ ಕಲಾಮಂದಿರವಲ್ಲ. ನನ್ನನ್ನು ಹಿಡಿದಿಟ್ಟಿರುವ ಪ್ರಪಂಚ ಪಂಜರ! ಪ್ರಪಂಚವೆಲ್ಲಿದೆ? ಯಾರೊ ಡನೆ? ಅಯ್ಯೋ! ಮನಸ್ಸಿಲ್ಲದ ಸಂಸಾರ ನಿಸ್ಸಾರವಲ್ಲವೆ? ಪ್ರೇಮವಿಲ್ಲದ ಸಂಬಂಧಕ್ಕೆ ಯಾರು ಬೆಲೆ ಕೊಡಬಲ್ಲರು? ಅಹುದು. **ನೈಜ ಪ್ರೇಮವೇ ಸುಧೆಯ ಸಿಂಧು!** ಇರಲಿ ಈ ಆಲಾಪನೆಗಳೇಕೆ ನನ್ನನ್ನು ಕೊರೆಯು ತ್ತಿವೆ? ನಿತ್ಯವೂ ಅತ್ಯುನ್ನತ ಬೆಟ್ಟದ ತುದಿಯಿಂದ ಕೆಳಗುರುಳಿಸುವವು. ಸಹಜವೇ ಸರಿ! ನನ್ನ ಕರ್ಮಫಲ ......! ಸ್ವಾಮಿಯ ಪವಿತ್ರಾತ್ಮಕ್ಕೆ ಕಲಂಕ ಹಚ್ಚಿದೆ...... ಭಾಷೆ ಕೊಟ್ಟು ಮಾಂಸದ ಮೋಹವನ್ನು ತೀರಿಸಿ ಕೊಂಡೆ. ಅಯ್ಯೋ! ಹೀಗಾಗಬೇಕೆಂದು ವಿಧಿ ಬರೆದಿರುವಳೇ? ಇರಬ ಹುದು! ಅವರೇನು ಹೇಳಲಿಲ್ಲ. ಹೇಳಿದರು ಮುಖ್ಯವಾಗಿ ಜಾತಿಯ ಪ್ರಶ್ನೆ ಯನ್ನು ಎದುರಿಗಿಟ್ಟರು. ಸಮಾಜದ ಕಟ್ಟು ಕಟ್ಟಳೆಯನ್ನು ಬಿಡಿಬಿಡಿಸಿ ತಿಳಿಸಿ, ದುರಂತ ಚಿತ್ರಗಳನ್ನು ತೋರಿಸಿ ಕೊಟ್ಟರು ...... ಒಂದೋ...... ಎರಡೋ ...... ಅಲ್ಲ. ಅಖಂಡ ಒಂದು ವರ್ಷ ಕಾಲಾವಧಿಯಲ್ಲೂ ಅದೇ ಮಾತು ಹೇಳಿದರು. "**ಆತ್ಮ ಒಂದೇ, ದೇವ ಒಂದೇ ಪ್ರೇಮ ಒಂದೇ** ......ಎಂದು ಹಾಡಿದರು. ಭಾವೋನ್ಮತ್ತರಾಗಿ ನೃತ್ಯ ಭಂಗಿಯಲ್ಲಿ ನಿಂತರು ಸಂಗೀತ ಶಾರದೆಯ ತಾಳ ಮೇಳದಲ್ಲಿ ತೇಲಿ ಮುಳುಗಿದರು. ...... ಆದರೆ ......? ಅವರ ಮನಸ್ಸಿಗೆ ಮಲಿನತೆ ಅಂಟಿತೇ? ಇಲ್ಲ. ಸತ್ಯವಾಗಿಯೂ

ಇಲ್ಲ ...... ಹಾಗಾದರೆ ......... ನಾನೇ ನಾನೇ ...... ಈ ಚಾಂಡಾ ಲಿನಿ ...... ಆ ನನ್ನ ಸ್ವಾಮಿಯ ಹೃದಯವನ್ನು ಸೀಳಿದವಳು ......... ನಾನೇ ...... ನಾನೇ ...... ಅಯ್ಯೋ... ಹಾಯ್ ...... !

X X X X

ಕಾಲೆ ಬಿಟ್ಟಾಗ ಆರಾಗಿರಬಹುದು. ಆದರೆ ನಾನೇ ತಿಳಿಯದಂತೆ ನನ್ನನ್ನು ಲೆಕ್ಕಿಸದಂತೆ, ನನ್ನ ಕಾಲುಗಳ ಜೊತೆಗೆ ಮನಸ್ಸೆಲ್ಲಿಗೆ ಹೊರ ಟಿತ್ತು? ಅಹುದು. ಅವರ " ಕಲಾಮಂದಿರ " ಕ್ಕೆ. ಅವರು ಲೋಹ ಚುಂಬಕ! ನಾನ-? ಕಬ್ಬಿಣದ ಪುಡಿ ! ಛೀ! ಇದೆಂಥ ಹೋಲಿಕೆ! ಹೋಲಿಕೆಯಲ್ಲ ಅನುಭವ! ಅವರ ವ್ಯಕ್ತಿತ್ವದ ಗುರುತು!'

ಆದೇ ಆಗ ಸೂರ್ಯ ದೇವನು ಸೌಂದರ್ಯದ ಶರಧಿಯಲ್ಲಿ ರಾಸಕ್ರೀಡೆ ಯನ್ನಾಡುತ್ತಿದ್ದನು. ನಾನೂ ಹೊರಟೆ .. ... ಹೊರಟೆ ...... ಎಲ್ಲಿಗೆ? ಗುರುದೇವನ ಸನ್ನಿಧಾನಕ್ಕೆ! ಮನಸ್ಸೇಕೋ ಸಂಕೋಚ ತಳೆದಿತ್ತು ಆದರೆ ಒಡಲ ಮಡಲಿನಿಂದ ಆಶಾತುರತೆಯು ಕಾರಂಜಿಯಾಗಿ ಪುಟಿಯ ಲಿಲ್ಲವೇ? ಅವರು ಹೇಗೋ ಏನೋ! ......ಆಗಲಿ......

" ಸರ್ ... .. ಸರ್ ... .. ಸರ್ .. "

ಅಯ್ಯೋ! ಕದವೇಕೆ ಮುರಿದು ಪುಡಿ ಪುಡಿಯಾಗಬಾರದು ......? ಆಹಾ! ಇದೇನು? " ಮತ್ತೆ, ಮತ್ತೆ ಉಕ್ಕುತಿದೆ ನಿನ್ನ ಮೇಲೆ ಮೋಹ" ಅಹಹಾ! ಅಮೃತ ಪಾನ! ಅಲ್ಲ ಗಾನಾನಂದ! ಅವರ ದಿವ್ಯ ಕಲೋಪಾ ಸನೆಯ ತಪದ ಸಿದ್ಧಿ! ಆಗಲಿ .. .. ಇನ್ನೊಮ್ಮೆ......

" ಸರ್ .. . ಸರ್ . ಸರ್ . ".

" ಯಾರದು? ಬಂದೆ ...... "

ನಾನು ಮೈಯೆಲ್ಲಾ ಕಣ್ಣಾದಂತೆ ಅವರನ್ನೇ ನಿರೀಕ್ಷಿಸುತ್ತಿದ್ದೆ.

“ಏಕೆ ? ಕ್ಲಾಸಿಗೆ ಬರುತ್ತೀಯಾ ...... ?” ಕದತೆಗೆದು ಅವರೇ ಕೇಳಿದರು. ಅಚ್ಚರಿಯಾಗಿಯೂ ನೋಡಿದರಲ್ಲವೇ ?

x x x x

“ಹೀಗಲ್ಲ ...... ಇಲ್ಲಿನೋಡು. .. ...... ಹೀಗೆ, ಮೈನಡುಗಬಾರದು. ದೃಷ್ಟಿ ಅಚಲವಾಗಿರಲಿ. ಎದುರು ನೋಡು .. .... ಬೆರಳು, ಕಮಲ ದೆಸಳನಂತಾಗಬೇಕು. ಹೂಂ, ಈ ಸಾರಿ ಹಾಗೆಯೇ ನಿಲ್ಲು ...... ನನ್ನಂತೆಯೇ ಹೆಜ್ಜೆಯನ್ನಿಡು ....... ಗೆಜ್ಜೆಯನಾದವಷ್ಟಾಗಬಾರದು ......... ಸರಿ, ನೀನು ಕುಣಿ ...... ನಾನು ಹಾಡುತ್ತೇನೆ” ಆಹಾ ! ಆ ದಿನಗಳು ಮತ್ತೆ ಎಂದಾದರೂ ಬರುವವೇ ?

x x x x

“ಉಷಾ ನೀನು ಬಲು ಜಾಣೆ ನೋಡು ಒಂದೊಂದು ವರ್ಷದ ವರೆಗ ಕಲಿತರೂ ಉಳಿದವರು ನಿನ್ನಷ್ಟು ನುರಿತಿಲ್ಲವಲ್ಲ ...... ?

“ಎಲ್ಲವೂ ತಮ್ಮ ಕೃಪೆ !”

“ಛೀ ! ಹಾಗೆಂದರೆ ಹೇಗೆ ಉಷಾದೇವಿ ? ನಿನ್ನ ಪರಿಶ್ರಮದ ಪ್ರತಿಫಲವೇ ಅನ್ನು”

“ಇರಲಿ ಸರ್. ನಾನು ಬಂದು ಆರು ತಿಂಗಳಾಗಿರಬಹುದಷ್ಟೇ ?

“ಸರಿ ಹೆಚ್ಚೇನಿಲ್ಲ...... ಉಷಾ ! ನಿನ್ನಂಥ ಬುದ್ಧಿ ಕುಶಲತೆಯಾದ ಹುಡುಗಿಯನ್ನೇ ನಾನು ನೋಡಿಲ್ಲವಲ್ಲ !”

" ನಾನೂ ಹಾಗೆಯೇ ಸರ್ ! ನಿಮ್ಮಂಥ ಕಲಾವಿಧರನ್ನೇ ಕಂಡಿಲ್ಲ. ನಿಮ್ಮ ಗಾಯನ, ನೃತ್ಯಗಳನ್ನು ಬಿಟ್ಟರೆ ನನಗೆ ಏನೂ ಸೇರುವದಿಲ್ಲ ! "

" ಹೀಗೋ ? ನನಗೂ ಹಾಗೆಯೇ ಉಷಾ ! ನೀನು ಉತ್ತಮವಾಗಿ ಒಂದು ಉಷಾ ನೃತ್ಯ ಮಾಡು ನೋಡುವಾ ! "

" ಸರ್ ಹಾಗಾದರೆ ನೀವೂ ತಾಂಡವ ನೃತ್ಯ ಮಾಡುವಿರಷ್ಟೇ ? "

X X X X

" ಉಷಾ ! ಹೊತ್ತಾಯಿತು. ನೀನು ಮನೆಗೆ ನಡೆ. ಎಲ್ಲರೂ ಹೋಗಿದ್ದಾರೆ ನೋಡು. "

" ಇಲ್ಲ ಸರ್ ಇನ್ನೊಂದು ಪ್ರೇಮ ಗೀತೆ ಹಾಡಬೇಕು. "

" ಈಗ ಸಾಕು. ನಾಳೆ ಹೇಳ್ತೇನೆ... ಹೂಂ ... ಏಳರ ಮೇಲಾಯ್ತು ನಡೆ ಇನ್ನು ...... "

" ಇಲ್ಲ ಸರ್ ಏಕೋ ತಲೆ ನೋವು ......... ಮೇಲೆ ಏಳೋದಕ್ಕೆ ತ್ರಾಸಾಗುತ್ತದೆ. "

X X X X

" ಏಕೆ ಉಷಾ ಇತ್ತಿತ್ತಲಾಗಿ ಮುಖ ಬತ್ತುತ್ತಿದೆಯಲ್ಲ ... ?

" ಏಕೂ ಇಲ್ಲ ಸರ್ ...... "

“ ದೇಹವೂ ಕೃಶವಾಗುತ್ತ ನಡೆದಿದೆ. ನಿನ್ನಲ್ಲಿ ಉತ್ಸಾಹವೇ ಅಡಗಲನುವಾಗಿದೆಯಲ್ಲ. ಏಕೆ ?

“ ಇರಲಿ, ಒಂದು ಭಾವಗೀತೆಯನ್ನು ಹೇಳು......ನಾನು ....... ಹಾರ್ಮೋನಿಯಮ್ ಬಾರಿಸುತ್ತೇನೆ.”

“ ನೆಗಡಿಯಾಗಿದೆ ಸ್ವರ್ ...... ನೀವೇ ಹೇಳಿರಿ ......... ಅಷ್ಟಾದರೂ ಆನಂದ ಪಡೆಯುತ್ತೇನೆ ”

“ ಉಷಾ ನಿನ್ನ ದಿನಚರ್ಯೆಯೇ ಬದಲಾವಣೆಯಾಗಿದೆಯಲ್ಲಾ... ... ಶಾಲೆಯಲ್ಲಿಯೂ ಅಭ್ಯಾಸವಿಲ್ಲ ...... ಇಲ್ಲಿಯೂ ....... ನಿನ್ನ ಮನಸ್ಸಿನಲ್ಲಿರುವದಾದರೂ ಏನು ? ..........

“ ಕಣ್ಣೀರು ಸುರಿಸುವುದೇ ! ......ಉಷಾ ...... ಬಿಸಿಯುಸಿರು ! ಹೇಳುವಿಯೋ ಇಲ್ಲವೋ ...... ? ”

X X Z X

“ ಇಲ್ಲ ಸ್ವರ್ ...... ಎಲ್ಲಿಗಾದರೂ ಹೋಗಿಬಿಡೋಣ ...... ಈ ಸಮಾಜದಲ್ಲಿ ಸ್ಥಾನ ಸಿಗದಿದ್ದರೇನಾಯ್ತು. ಬೇಡ ನನಗೀ ಜಗತ್ತಿನ ಸಂಪರ್ಕವೇ ಬೇಡ. ಜಾತಿ ! ಅಲ್ಲ. ಕಲ್ಪನಾಸುರಿಯುನಿಶೆ. ಸ್ವರ್ ನಾನೆಲ್ಲದಕ್ಕೂ ಸಿದ್ಧಳಿದ್ದೇನೆ .......... ”

“ ಬೇಡ ಉಷಾ ! ನೀನಿನ್ನೂ ಬುದ್ಧಿಬಲಿಯದ ಅಬಲೆ, ನಿನಗೆ ಜಗತ್ತಿನ ಕಲ್ಪನೆಯಿಲ್ಲ ನಾವು ವಿವಾಹವಾಗುವದಾದರೆ ನನ್ನ— ನಿನ್ನ ಮನೆಯವರು ಒಪ್ಪುವದಿಲ್ಲ. ನೀನು ನನ್ನನ್ನೇ ಲಗ್ನವಾದರೆ ...... ನೋಡು ವಿಚಾರಿಸು ............ ಸಮಾಜವೇ ನಮ್ಮನ್ನು ತುಚ್ಛೀಕರಿಸಬಹುದು.

ಯಾವದೇ ತರಹದ ಸಹಾಯ— ಸಹಕಾರಗಳು ಎಂದೂ ದೊರೆಯಲಾರವು. ನಮ್ಮ ವಿಚಾರ ಬಾಂದಳದಲ್ಲಿ, ಜಾತಿ- ಮತ- ಪಂಥಗಳ ಕಾರ್ಮೋಡಗಳು ಮುಸುಕಿರದಿದ್ದರೂ ಸಮಾಜದ ಕಣ್ಣಲ್ಲಿ ಬಾನೆಲ್ಲ ಕಾರ್ಗತ್ತಲು!"

" ಆಗಲಿ ನನ್ನ ತಂದೆ ತಾಯಿ ಬಂಧುಬಳಗ ನೋಡುವದಿಲ್ಲ. ಈ ಅಂಥ ಸಮಾಜದ ಗೋಜಿಗೂ ಹೋಗುವದಿಲ್ಲ. ಸ್ವರ್ ......... ಇನ್ನು ನಾನು ಜೀವಿಸಲಾರೆ. ಒಮ್ಮೆ ಮನಸ್ಸಿನ ಪರದೆಯ ಮೇಲೆ ಮೂಡಿನಿಂತ ನಿಮ್ಮ ಪ್ರೇಮಭರಿತ ಮೂರ್ತಿಯನ್ನು ಕಳೆದುಕೊಳ್ಳಲಾರೆ. ನೀವೇ ನನ್ನ ಸ್ವಾಮಿ...... ನಿಮ್ಮನ್ನುಳಿದರೆ ಮಿಕ್ಕುದೀ ಜಗತ್ತು ನನ್ನ ಪಾಲಿಗೆ ಮಿಥ್ಯ! ಆಗಲಿ ನಿಮ್ಮ ಕರಾರಿನ ಮೇರೆಗೆ ಕೈಹಿಡಿದು ಲಗ್ನವಾಗುತ್ತೇನೆ. ಆದರೆ... ಇಂದು ...... "

X X X X

ಸ್ವರ್ ಪ್ರೇಮವೆಂದರೇನು ...... ?

" ಇದೋ ...... ಇದೇ ...... "

" ನೀವು ಯಾವಾಗಲೂ ಹೀಗೇನೆ ...... "

ಇದೋ ಚನ್ನಾಗಿ ಉತ್ತರ ಹೇಳ್ತೇನೆ ಉಷಾ. **ಪ್ರೇಮವೆಂದರೆ ... ... ಅಂತರಂಗದ ಅಮೃತ ಹೊನಲು.** "

" ಹಾಗಾದರೆ **ಪ್ರಣಯವೆಂದರೇನು** ? "

**" ಪ್ರಣಯವೆಂದರೆ, ಎದೆಯಾಕಾಶದ ಹಾಲು ಬೆಳದಿಂಗಳು."**

" ಹೌದು ...... **ಪ್ರೇಮಿಗಳೆಂದರೆ** ....... ? " **" ಪ್ರೇಮಿಗಳೆಂದರೆ ಮಾನಸ ತಿಳಿಗೊಳದಲ್ಲಿ ಅರಳಿದ ಕುಮುದಗಳು.** "

X X X X

ಇರಲಿ ಉಷಾ ! ನಿನ್ನೆ ನೀನು ಬರಲೇ ಇಲ್ಲವಾದದ್ದರಿಂದ ಎಳ್ಳಿನಿತೂ ಸೊಗಸಿರಲಿಲ್ಲ. ಮತ್ತೆ ಊಟವೂ ...... "

" ಅಯ್ಯೋ ! ನಿಜವೇ ? "

" ನಿಜ "

" ಕ್ಷಮಿಸಿ ಸರ್, ನೀವಾದರೂ ಅತ್ತ ಬರಬಾರದೇ ? "

" ಏಕೆ ಬರಬೇಕು. ನಾನು ಬರೋದೆ ಇಲ್ಲ ....... "

ಅಯ್ಯೋ ! ಇಷ್ಟಕ್ಕೆ ಕಣ್ಣೀರಗರೆಯೊದೇ ......... ..ಉಷಾ ! ಈ ಸೀರೆ ನಿನಗೆ ನಿಜವಾಗಿಯೂ ಒಪ್ಪುವದು ........... ಇದನ್ನೇ ಉಟ್ಟು ಕೊಂಡು ಬಾ ...... "

" ಬೇಡಿ ಸರ್ ನೀವೇ ಸಿರಿ ......... !

X X X X

ಎಂಟು ದಿನವಾದರೂ ಬರಲೇ ಇಲ್ಲವಲ್ಲ ? ...... ಮನೆಯಲ್ಲಿ... ? ಏನಾದರೂ ...... ಛೇ ! ಬಂದು ಹೋಗಲೇಬೇಕಾಗಿತ್ತು. ....... ಊರಿಗೆ ಹೋಗಿರಬಹುದೇ ? ...... ಅದು ಸಾಧ್ಯವಿಲ್ಲ ...... ತಿಳಿಸಿಯಾದರು ... ಹೋಗಬಹುದಾಗಿತ್ತು ......... ಎಂಟು ದಿವಸ ....... ಒಂಭತ್ತು ...... ಹತ್ತು ...... ಹದಿನೈದು ...... ಓಹೋ ! ಅವರಾರು ? ಬಹುತರವಾಗಿ ...... ಆವಳೇ ಇರಬಹುದು ......

" ಉಷಾ ! ಊರಲ್ಲಿರಲಿಲ್ಲವೇ ......, ?

" ಇದ್ದೆ ಸ್ಸರ್...... "

" ಹಾಗಾದರೆ ...... "

" ಎಲ್ಲಾ ಘಾತ ಆಯಿತು ಸ್ಸರ್ ...... ಒಂದು ಪ್ರಶ್ನೆ..."

" ಹಾ ! ಏನಾಯಿತು?......"

" ಅದೇ ...... ಮನೆಯೊಳಗೆಲ್ಲ ಈ ಸುದ್ದಿ ಗೊತ್ತಾಗಿದೆ......... "ಅಲ್ಲದೆ ಊರಲ್ಲಿಯ ಜನರೂ ನಮ್ಮ ತಂದೆಯವರನ್ನು ನೋಡಿದೊಡನೆ ವಕ್ರವಾಗಿ ನುಡೀತಾರಂತೆ ...... ಇಂದು ಮನೆಯಲ್ಲಿ ನಡೆದಿತ್ತು. "

" ಏನಾಯಿತು ಉಷಾ ! "

" ನಿಮ್ಮನ್ನೇನೋ ಹೊಡೀತಾರಂತೆ. ನೀವು ಒಳ್ಳೆಯವರಿಲ್ಲವಂತೆ. ನೀವು ನನ್ನಂಥ ಹುಡುಗಿಯರನ್ನು ಹಾಳುಮಾಡಿದ್ದೀರಂತೆ ... ಹೋಗ್ಲಿ... ಸ್ಸರ್ ...... ಈಗೊಂದು ಪ್ರಶ್ನೆ.

" ಎಲ್ಲಿಗಾದ್ರೂ ಹೋಗಿಬಿಡೋಣವೇ...... ? "

" ಛೀ ! ಸತ್ಯಕ್ಕೆ ಎಲ್ಲಿಯಾದರೂ ಜಯವಿದೆ ! "

"ಸಾಧ್ಯವಿಲ್ಲ ಸ್ಸರ್, ನಾನೆಂದೂ ಇಲ್ಲಿ ಜೀವಿಸಿರಲಾರೆ. ನೀವೇನನಗೆ ಬೇಕು. ಎಲ್ಲಿಯಾದರೂ ಹೋಗಿಬಿಟ್ಟರಾಯಿತು ! ನೀವೇನಂದಿರಿ? "

"ಸಾಧ್ಯವಿಲ್ಲ! ಈ ಪ್ರಸಂಗವು ಪ್ರವಾಹಪ್ರದವಾಗಿ ಹರಿದರೂ ಎದುರು ಈಸಬೇಕು ಉಷಾ ! ಇರಲಿ ನಿನ್ನ ತಂದೆ ಏನು ಹೇಳಿದರು ? "

" ಸ್ಸರ್, ಮುಖ್ಯವಾಗಿ ಜಾತಿ ಹಾಗೂ ಸಮಾಜ ! ನಾನು ನಿಮ್ಮನ್ನು ಲಗ್ನವಾದರೆ, ನಮ್ಮ ಜಾತಿಯಲ್ಲಿ ಅವರಿಗೆ ಎಲ್ಲಿಯೂ ಸ್ಥಾನ ಗಳು ಸಿಗುವದಿಲ್ಲವಂತೆ. ಜಾತಿ ಬಾಹಿರರಾಗಿ ಹಾಳಾಗಬೇಕಾಗುವದಂತೆ.

ಸಮಾಜದಲ್ಲಿ ಅವರಿಗಿರುವ ಘನತೆ ಗೌರವಗಳಿಗೆ ಧಕ್ಕೆ ತಗಲುವದಲ್ಲದೆ .... ಅವರು ಕೆರೆ ಭಾವಿಯ ಪಾಲಾಗುವದು ನಿಶ್ಚಿತವಂತೆ ......... ಅಯ್ಯೋ ! ತಾಯಿಯವರೂ ಇದನ್ನೇ ಹೇಳಿದರು..... "ನೀನು ಅವನನ್ನು ಲಗ್ನವಾಗುವದಾದರೆ ...... ನಾನು ನಿಜವಾಗಿಯೂ ಮಕ್ಕಳನ್ನು ಕರೆದುಕೊಂಡು ಭಾವಿಯಲ್ಲಿ ಬಿದ್ದು ಬಿಡುತ್ತೇನೆ ..... ಇಲ್ಲವೇ ವಿಷವನ್ನಾದರೂ ಕುಡಿಯುತ್ತೇನೆ. ಅಯ್ಯೋ ! ಜಾತಿ,ನೀತಿ ಬಾಹಿರತೆ" ಎಂದು ಕಣ್ಣೀರಿಟ್ಟರಲ್ಲದೆ ಈಗೆರಡು ದಿವಸ ಬಾಯಿಯಲ್ಲಿ ನೀರನ್ನೂ ಹಾಕಿಲ್ಲ. "

" ಇರಲಿ ಉಷಾ, ಹಿಂದೆ ಆಡಿದ ಮಾತುಗಳನ್ನು ಸ್ಮೃತಿಪಟಲದ ಮೇಲೆ ಮೂಡಿಸಿಕೋ ...... ನಾನು ಹೇಳಿದ ಜಟಿಲ ಸಮಸ್ಯೆಗಳನ್ನು ವಿವೇಕದ ತಕ್ಕಡಿಯಲ್ಲಿಟ್ಟು ತೂಗಿ ನೋಡು. ಹೆಣ್ಣು ಸಹಜವಾದ ಮನಸ್ಸಿಗೆ ಮಾರು ಹೋಗಿ, ಹೃದಯವನ್ನೊಡೆದು, ಪುಡಿ ಪುಡಿ ಮಾಡಬೇಡ, ಈಗ ಬಂದಿರುವ ಎಲ್ಲ ಸಮಸ್ಯೆಗಳನ್ನೂ ನಾನಂದು ನಿನ್ನೆದುರಿಗಿಟ್ಟಿದ್ದೇನೆಯಾದರೂ ನೀನು ಒಪ್ಪಿಕೊಂಡು, ಮನಸ್ಸಿನ ಪ್ರಬಲ ಆಶೆಯನ್ನು ಹಿಂಗಿಸಿಕೊಂಡಿ ಹೃದಯವನ್ನೇ ಸೆರೆಹಿಡಿದು ಚಕ್ಕಂದವಾಡಿದಿ ...... ನೋಡು. ಇನ್ನೊಮ್ಮೆ ವಿಚಾರಿಸು ...... "

" ಇಲ್ಲ ಸರ್ ನನಗೆ ನೀವೇ ಬೇಕೆಂದೆನಿಸಿದರೂ ಈಗ ಸೋಲ ಬೇಕಾಗಿದೆ. ನಾನು ಇತ್ತ ಬಂದು ಬಿಟ್ಟರೆ, ಅವರೆಲ್ಲ ಪ್ರಾಣ ತೆಗೆದುಕೊಳ್ಳುವರಂತೆ. ತಂದೆ ತಾಯಿಗಳ ಕೊಲೆಯ ಪಾಪ ತಟ್ಟದಿದ್ದೀತೇ ? "

" ಆಗಲಿ ಉಷಾ ! ನಿನ್ನ ಇಚ್ಛೆ. ಪ್ರೇಮಕ್ಕೆ ಯಾವ ನಿರ್ಬಂಧವೂ ಇಲ್ಲ. ನಿನ್ನ ಮನಸ್ಸಿಗೆ ನಾನೇ ಬೇಕೆಂದೆನಿಸಿದರೆ ..... ... ಮರಳಿ ಬಾ ! ಎಂದು ಬಂದರೂ ......... ನಿನ್ನನ್ನು ಸ್ವೀಕರಿಸಲು ನಾನು ಸದಾಸಿದ್ಧ... ...ಆದರೇನು ... ನಿನ್ನರ್ಧ ಹೃದಯ ಮಾತ್ರ ಕಡಿಯಿತು......

" ಹೋಗು...... ಹೊತ್ತಾಯಿತು ಹೋಗು...... ಉಷಾ"

x x x x

ಆರು ತಿಂಗಳು ! [?]

ಅಯ್ಯೋ! ಕಾರಾಗಾರದ ವಾಸವಿದು. ಇಲ್ಲಿ ತೃಣ ಮಾತ್ರಕ್ಕೂ ಸುಖ ವಿಲ್ಲ. ಆದರೇನು ಈ ಜಾತಿಯ ವಿಷವನ್ನು ಕುಡಿಯದೇ ಗತ್ಯಂತರವಿಲ್ಲ! ಸರಿ. ಅವರಿಗೆ ಹುಚ್ಚು ಹಿಡಿದಿರಬಹುದೆ? ಇಲ್ಲ. ಹುಚ್ಚಲ್ಲ ಅದು ಭ್ರಮೆ. ಅಯ್ಯೋ ! ಎಷ್ಟು ಬಡಕಾಗಿದ್ದಾರೆ, ಪಾಪ ! ನಾನೇ ಇದಕ್ಕೆ ಕಾರಣಳು. ಎಲ್ಲಿದೆ ಆ ಸರ್ವಾಂಗ ಸುಂದರದೇಹ ! ಅಯ್ಯೋ ! ಎಷ್ಟು ಆ ತಲೆಗೂ ದಲು, ಗಡ್ಡ — ಮೀಸೆಗಳೇನು ? ಎಲ್ಲಿವೆ ಆ ಬಿಳಿ ಬಟ್ಟೆಗಳು ! ಎಲ್ಲವೂ ಕೊಳೆ! ಊಟವೂ ಇಲ್ಲವಂತೆ...... ಯಾರೊಡನೆಯೂ ಮಾತು ಕತೆಯೂ ಇಲ್ಲವಂತೆ . ... ಕಣ್ಣುಗಳೇನು ಕೆಂಡವನ್ನು ಕಾರುವವೋ ? ಅಥವಾ... ಸುರಾ ? ಛೀ ಅಶಕ್ಯ ! ...... ಹೇಳಲಿಕ್ಕೆ ಬಾರದು. ಅವರಿಗೆ ದುಡಿ ಮೆಯೇ ಇಲ್ಲವೆಂದಾಗ ದುಡ್ಡು ಬರುವ ದಾರಿಯಾವದು ..... ? ಉಪ ವಾಸ ! ...... ಎಷ್ಟು ದಿನ ..... ? ಎಷ್ಟು ದಿನ ......ಅಯ್ಯೋ ! ನಿನ್ನೆ ಬವಳಿಬಂದು ಬಿದ್ದಿದ್ದರಂತೆ... ಹಾಯ್...... ! ”

x x x x

ಇದೇನು ? ಇದರಲ್ಲಿ ........ಅಸ್ಥಿಪಂಜರಗಳು ! ...... ಸುತ್ತಲೂ ತಾಂಡವವಾಡುತ್ತಿವೆ ...... ಅಬ್ಬಾ ! ಯಾರದಿದು ... ? ನನ್ನ ಹೆಸರು... ಸಾವಿರಾರುಸಲ ಬರೆದಿದೆ ಉಷಾ... ಉಷಾ... ಉಷಾ... ಈ ಓಲೆಗೆ ಸಹಿ ಮಾಡಿದವರಾರು ? ಪ್ರೇಮನಾಥ....... ಹಾಯ್......! ಮತ್ತೂ ಬಂದಿದೆ ಯಲ್ಲಾ...... ಇದೇನು ?......

“ ಉಷಾ ! ಪ್ರೇಮವು ನಿಜಕ್ಕೂ ಜ್ವಾಲೆಯಂತೆ, ಅದನ್ನು ಕಾಮುದ, ಮನಸ್ಸಿನಿಂದ ಪ್ರೇಮದ ಹೆಸರಿಟ್ಟು ಮುಟ್ಟಿದರೆ ಕೈ ಏನಾಗಬಹುದು......? ಹಾಗೆಯೇ ನಿನ್ನ ಸ್ಥಿತಿ. ಕಿರುದೋಣಿಯು ಕಡಲಿನಲ್ಲಿ...... ತುಂತುರವನಿ ಗಳ ಒಡನಾಟದಿಂದ ಸರಸವಾಡುತ್ತ, ತೇಲುತ್ತಿರುವಾಗ, ಕಡಲು ಉಕ್ಕೇರಿ ದಂತೆ ನನ್ನ ಸ್ಥಿತಿ. ಅಗಲಿ ..... ನೀನೆಲ್ಲಿಯಾದರೂ ಇರು. ನಾನು ..... ನಿನ್ನವನಾಗಿರುವೆ.

"ತೂಗುತಿದೆ ನನ್ನ ಮನ,
ಆಶೆ – ನಿರಾಶೆಗಳ ವಶ,
ಮನದಿ ಕಟ್ಟಿದ ಪ್ರೇಮ ಬನ
"ಮರುಭೂಮಿಯಾಯ್ತು ಮರುಕ್ಷಣ"

— ಪ್ರೇಮನಾಥ

X X X X

"ಪ್ರೇಮನಾಥನಿಗೆ ಹುಚ್ಚು ಹಿಡಿದಿದೆ. ಶೆರೆ ಕುಡಿಯುವದನ್ನು ಕಲಿತಿದ್ದಾನೆ...... ! ನಿನ್ನೆಯ ದಿನ ಆ ಸೂಳೆಯ ಮನೆಯಲ್ಲಿ ಗಲಾಟೆ ಮಾಡಿದುದಕ್ಕೆ...... ಪೋಲೀಸರು ......ಕಚೇರಿಗೆ ಕೊಂಡೊಯ್ದಿರುವರಂತೆ." ತಂದೆಯವರ ಈ ಮಾತು ಸತ್ಯವೋ...... ? ಹೇಗೆ ಹೇಳಲು ಸಾಧ್ಯ...? ನನ್ನಲ್ಲಿ ಯಾವ ಅಳತೆಗೋಲಿದೆ ? ದಿನವೂ ಒಂದಿಲ್ಲ ಒಂದು ಸುದ್ದಿಯನ್ನು ವಿಪರೀತ ರೀತಿಯಲ್ಲಿ ಹೇಳುವವರಲ್ಲ...... ! ಏನೋ ಎಂತೋ ದೇವನೇ ಬಲ್ಲ ..... ಎಲ್ಲಲ್ಲಿಯೂ ಪ್ರೇಮನಾಥರು ಚೀರಿಕೊಳ್ಳುವರಂತೆ.

"ಉಷಾ ! ನನ್ನನ್ನು ಹಾಳು ಮಾಡಿದಳು...... ಅವಳು ಕುಟಿಲೆ, ಕಂಟಕಿ . . . "

ಇದು ನಿಜವೇ ? ನಿಜವೇ......? ಅಯ್ಯೋ !... ಹಾಯ್...!

X X X X

"ಮಾನಹಾನಿಯಾದ ಮೇಲೆ ಏನು ಕೊಟ್ಟರೆ ಬಂದೀತು...... ? ಉಷಾ, ನೀನು ತೀವ್ರವೇ ಲಗ್ನವಾಗಿ ಈ ಊರು ಬಿಟ್ಟು ಬಿಡು...ಇಲ್ಲವಾದರೆ ಅವನ ಉಪಟಳ ಹೆಚ್ಚಾಗಬಹುದಲ್ಲದೆ, ? ನಾಲ್ಕು ಜನರಲ್ಲಿ ಅಪಹಾ

ಸ್ಯಕ್ಕೆ ಗುರಿಯಾಗಬೇಕಾದೀತು...... ನೀನಿನ್ನೂ ಸಣ್ಣವಳು......" ತಂದೆಯವರು ಹೀಗೇಕೆ ಹೇಳುತ್ತಲಿದ್ದಾರೆ......? ಇದೆಲ್ಲವೂ ನಿಜವಿರಬಹುದೇ......? ಅಥವಾ ನನ್ನಿಂದ ಅವರನ್ನು ದೂರೀಕರಿಸಲು ಹೂಡಿದ ಆಟವಿರಬಹುದೆ ? ಏನೋ...... ಎಂತೋ...... ಯಾರು ಬಲ್ಲರು ? ಅಹುದು ತಂದೆಯವರು ಅಂದಂತೆ, ಲಗ್ನವಾಗಿಬಿಟ್ಟರಾಯಿತು. ಆಯಿತು...... ಪ್ರೇಮನಾಥ ಇನ್ನಿಲ್ಲ. ಹುಚ್ಚನಿದ್ದಾನೆ...... ಹುಚ್ಚ !...... ಹುಚ್ಚ !!

x x x x

ವಿಧಿಯ ವಿರಾಟ ಶಕ್ತಿ, ನನ್ನನ್ನು ಇಲ್ಲಿಗೆ ನೂಕಿತು. ಇದಕ್ಕೆ ಏನೆನ್ನಬೇಕು ? ಇದು ಯಾರಮನೆ ...... ! ಪತಿಯ ಮನೆ !! ನನ್ನ ಲಗ್ನವಾಯಿತೇ ? ಅಯ್ಯೋ ! ಆಯಿತು. ಈ ಮನೆಗೆ ನಾನೆಂದು ಬಂದೆ ? ನಿನ್ನೆ. ಪತಿದೇವನ ದರ್ಶನವೂ ನಿನ್ನೆಯಾಯಿತು. ಅವನೇ ನನ್ನ ಪತಿಯೇ ? ನಾನೇ ಅವನ ಸತಿಯೇ ? ಛೀ ! ಛೀ ! ನಾನು ಸತಿಯಲ್ಲ......ಸೂಳೆ...!

ಮೊದಲು ಬಾರಿಗೆ ಯಾವಗೆ ಹೃದಯವನ್ನು ನೀಡಿದೆನೋ ಅವನೇ ನಿಜವಾದ ಪತಿದೇವ ! ಅವನೇ...ಅವನೇ .. ಆ...... ಸರ್... ಪ್ರೇಮನಾಥ......

" ನಾನಿಲ್ಲಿ ನಿಲ್ಲಲಾರೆ. ನನಗಿಲ್ಲಿ ಸ್ಥಾನವಿಲ್ಲ. ಅಲ್ಲಿ ಆ ಕಲಾಮಂದಿರವೇ, ನನ್ನ ಮುಕ್ತಿಮಂದಿರ ! ಅಲ್ಲಿಗೆ ಇಂದೇ... ಈ ಕ್ಷಣವೇ ಹೊರಟರಾಯಿತು. ಅಯ್ಯೋ ! ಮತ್ತೂ ಸಮಾಜ, ಜಾತಿಯ ಜಟಿಲಪ್ರಶ್ನೆ, ಧುತ್ತೆಂದು ನಿಲ್ಲುವದು ! ನಿಲ್ಲಲಿ. ಪ್ರೇಮದೆದುರು ಅವುಗಳ ಆಟ, ನಡೆಯಲಾರದು. ಕಾಲ ಪುರುಷನೂ ಕೂಡ ಪ್ರೇಮವನ್ನುಗೆಲ್ಲಲರಿಯನು. ಯಾವ ಮಹತ್ತರವಾದ ಶಕ್ತಿಯೂ ಅದನ್ನು ತಡೆಗಟ್ಟಲಾರದು. ಯಾವ ಜಾತಿ, ಮತ, ಪಂಥ ಸಮಾಜವೂ ಪ್ರೇಮದ ನೈಜಕತೆಯನ್ನು ಅಳಿಯಲಾರವು ! ಸರಿ. ಅವರು

ಈಗೆಲ್ಲಿರಬಹುದು ? ಹೊರಟರಾಯಿತು. ಅಲ್ಲಿಯೇ ಆ ಸ್ವಾಮಿಯ ಸಾನಿಧ್ಯದಲ್ಲಿಯೇ ನನ್ನ ಪ್ರಾಣಾರ್ಪಿತವಾಗಲಿ. ಅವರು ಹಾಡುತ್ತಿರಬಹುದೇ ಈ ಹಾಡನ್ನು.

ತೂಗುತಿದೆ ನನ್ನ ಮನ,
ಆಶೆ—ನಿರಾಶೆಗಳ ವನ,
ಮನದಿ ಕಟ್ಟಿದ ಪ್ರೇಮಬನ;
ಮರುಭೂಮಿಯಾಯ್ತು ಮರುಚಣ !!

ನನ್ನಿಂದ ಅವರಿಗೆ ಅನ್ಯಾಯವಾಗಿದೆ. ಆದರೂ ಅವರು ಕ್ಷಮಿಸಬಹುದೇ ? ಆಗಲಿ ಇದೇ ಸಮಯ, ಮನೆಯಲ್ಲಿ ಯಾರೂ ಇಲ್ಲ. ಇದ್ದರೂ ಏನು ಮಾಡಬಲ್ಲರು ? ಅವರು ಕದ ಹಾಕಿಕೊಂಡು ಹಾಡುತ್ತಿರಬಹುದೇ ? ಹೋಗಿ ಕೂಗಿದರಾಯಿತು.

ಸ್ವರ್...... ಸ್ವರ್...... ಸ್ವರ್...... ಸ್ವರ್...... !

# ನಾವು ಅಪರಾಧಿಗಳಲ್ಲಾ !

ಮುಚ್ಚಂಜೆಯ ಮಬ್ಬುಗತ್ತಲಲ್ಲಿ ಆ ಎರಡೂ ವ್ಯಕ್ತಿಗಳೂ ಬಂಧನದ ಆಚೆಯ ಕಲ್ಪನೆಯ, ಕಡಲು ಕಟ್ಟುತ್ತಿದ್ದರು. ಹೃದಯದಉದ್ವೇಗಕ್ಕೆ ಭಾವನಾ ಪ್ರಪಂಚದ ಆವುದೋ ಒಂದು ಭೀಷಣತೆ ಅವರನ್ನು ವಿಚಾರ ವಿಮುಖರನ್ನಾಗಿ ಮಾಡುತ್ತಿದ್ದರೂ ಎಣಿಕೆ ಹಾಕುವಲ್ಲಿಯೋ ತನ್ಮಯರಾಗಿದ್ದರು. ಒಮ್ಮೆ ರುದ್ರಭಯಾನಕತೆಯಾವರಿಸಿದರೆ ಮಗದೊಮ್ಮೆ ಸುಂದರ ಬಾಳಿನ ಸೌಂದರ್ಯದ ಸೊಬಗು. ಹೀಗೆಯೇ ಆ ವ್ಯಕ್ತಿಗಳಲ್ಲಿ ವಿಚಾರ ಮಂಥನ ನಡೆದಿದ್ದಿತು. ಆದರೆ ಆ ಮಂಥನದಿಂದ ಹೊರಡುವದು ಅಮೃತವೋ ಹಾಲಾಹಲವೋ ಬಲ್ಲವರಾರು ?

ಆಗಲೇ ಮಬ್ಬು ಮುಸುಕಿದ ಮುಗಿಲಲ್ಲಿ ಮೋಡ ಪಡೆಗಳು ಘೋರ ಘರ್ಜನೆಗೈದವು ಆ ವ್ಯಕ್ತಿಗಳನ್ನು ನೋಡಲೆಂದೋ ಏನೋ ಭೂವ್ಯಾಕಾಶಕ್ಕೂ ನಿಬಿಡವಾಗಿ ಹಬ್ಬಿಕೊಂಡ ಕತ್ತಲೆಯ ಕಡಲನ್ನು ಭೇದಿಸಿ, ಸೆಳೆಮಿಂಚು ಮಿಂಚಿ, ಬೆಳಕ ಮಾಡಿಕೊಂಡಿತು. ಅವರ ಅಂತರಂಗದ ಉಸಿರು ಕೇಳಿಸಿತೋ ಏನೋ ಬಾನ್ದೇವಿ ಬಳಬಳನೆ ಕಣ್ಣೀರು ಸುರಿಸತೊಡಗಿದಳು. ನಿಂತವ್ಯಕ್ತಿಗಳು ನಿಂತಲ್ಲಿಯೇ ನಿಲ್ಲಲಿಲ್ಲ; ಕೊನೆಯ ನಿರ್ಧಾರದ ಕಾರ್ಯ ಸಾಧನೆಗೆ ಎಲ್ಲಿಯೋ ಮಾಯವಾದರು.

X X X X

ಮಲಗಿದವಳನ್ನು ಎಚ್ಚರಿಸಿದರೆ ಅನರ್ಥವಾದೀತೆಂದು ಅವರು ಯೋಚನೆ ಗೈದರು. ಹಾಗೆಯೇ ಅವಳ ಕೋಣೆಯು ಕದ ತೆಗೆದು ಹಾಳು ಹಾಸುಗೆಯು ಬದಿ ನಿಂತುಕೊಂಡರು ಹೆಚ್ಚು ಸಮಯ ನಿಂತು ಕೊಂಡರೆ ವಿಚಾರ ಪರ್ಯಟನವಾಗೀತೆಂಬ ಭಯುವಾಯಿತು. ತೆರೆದ ಕದವನ್ನು ಮತ್ತೆ ಮುಂದೂಡಿ ನಡುಮನೆಗೆ ಬಂದು ನಿಂತು ಕೊಂಡರು. ಕ್ಷಣಾರ್ಧದಲ್ಲಿ ಮತ್ತೆ ಮೂವರೂ ಕೋಣೆಯನ್ನು ಪ್ರವೇಶಿಸಿದರು. ಅವರ ಪಿಸುಮಾತು ಆ ಮಲಗಿದ ವ್ಯಕ್ತಿಗೆ ಅರ್ಥವಾಗದೇ ಹೋಗಲಿಲ್ಲ ಎಚ್ಚರಿಸದೇ ಬಿಡಲಿಲ್ಲ.

ಮೂವರೂ ಮಕ್ಕಳು ಹಿಡಿದ ಚೂರಿಗಳನ್ನು ನೋಡಿ ಆ ಮಹಾತಾಯಿ ಅಂಜಲಿಲ್ಲ. ಹರ್ಷಪುಲಕಿತಳಾಗಿ, ಮುದುಡಿದ ಮುಖದಲ್ಲಿ ನಗೆಯನ್ನು ಸೂಸಿದಳು. ಅದು ಹೇಗೆ ಪ್ರಕಟವಾಗಬೇಕು? ತಾಯಿ ಎದ್ದುದನ್ನು ಕಂಡು ಮಗಳು ಕೈ ದೀವಿಗೆಯನ್ನು ನೆಲದಮೇಲಿಟ್ಟು ಸುಮ್ಮನೇ ನಿಂತಳು. ಚಿಕ್ಕ ಮಗನು ಮೂಗು ಮುಚ್ಚಿಕೊಂಡಿದ್ದನು. ಹಿರಿಯ ಮಗನು ರುದ್ರಾವೇಶ ಭರಿತನಾಗಿ ಚೂರಿಯು ತದಿಯನ್ನೇ ನೆಟ್ಟ ದಿಟ್ಟಿಯಿಂದ ನೋಡುತ್ತಿದ್ದನು.

ಮಸು ಪ್ರಕಾಶದಲ್ಲಿ ಆ ತಾಯಿ ಅಸ್ಪಷ್ಟವಾಗಿ ಕಾಣುತ್ತಿದ್ದರೂ ಮಕ್ಕಳ ಗುರುತು ಸಿಕ್ಕದೆಯೇ ಹೋಗಲಿಲ್ಲ. ಮೊದಲು ಅವಳೇ ಮಾತೆತ್ತಿದಳು.

"ಏಕೆ ಇಷ್ಟು ಹೊತ್ತಿನಲ್ಲಿ ಇಲ್ಲಿಗೆ?"

"ಏಕೆ ಎಂದು ಕೇಳಬೇಡ...... ನಿನ್ನ ಕೊಲೆ"

"ನನ್ನ ಕೊಲೆ ........! ನಿಮ್ಮಿಂದ....... ಆಹಾ! ಮಕ್ಕಳಿಂದ ತಾಯಿಯ ಕೊಲೆ! ಅಗತ್ಯವಾಗಿ ಆಗಲಿ........." ಎಂದು ಆ ತಾಯಿ ಸಮ್ಮತಿಯನ್ನು ಸೂಚಿಸಿ, ಕೊನೆಯ ಸಂದೇಶಕ್ಕೆ ಎಡೆನೀಡಲು ಅವರಲ್ಲಿ ಕೇಳಿಕೊಂಡಳು. "............ ನಿನ್ನಿಂದ ನಮ್ಮೆಲ್ಲರ ಜೀವನವೇ ಹಾಳಾ

ಗುತ್ತದೆ. ನೀನೊಬ್ಬಳು ಸತ್ತುಹೋದರೆ ನಾವೆಲ್ಲಾ ಸುಖದಿಂದ ಬಾಳಲು ದಾರಿ ದೊರೆಯುತ್ತದೆ. " ಮೂವರು ಮಕ್ಕಳೂ ಹೀಗೆಯೇ ನುಡಿದರು.

" ಸರಿ. ನಿಮಗೆ ಸುಖವಾಗಲಿ. ಮಕ್ಕಳಿಗೆ ಸುಖ ದೊರೆಯಬಾರದೆನ್ನುವುದು ತಾಯಿಯ ಧರ್ಮವಲ್ಲ; ತಾಯ್ತನವು ನಿಷ್ಕಳಂಕವಾಗಿದೆ. ನಿಮ್ಮ ಸುಖೋಪಭೋಗಗಳೇ ನನ್ನವು. ನಿಮ್ಮ ಬಾಳಿನಲ್ಲಿಯ ಬೆಳಕೇ ನನ್ನ ಭಾಗ್ಯ! ನಿಮ್ಮ ಸುಖಜೀವನವೇ ನನ್ನ ಆನಂದ! ನಾನಾದರೂ ಈ ರೋಗದಿಂದ ಎಷ್ಟು ದಿನ ಬಳಲಬೇಕ? ನನ್ನ ಕರ್ಮದ ಫಲವನ್ನು ನಾನೇ ಉಣ್ಣಬೇಕು. ಹೂಂ. ನಾನಾಗಿಯೇ ಸಾಯಬೇಕೆಂದು ಅನೇಕ ಹವಣಿಕೆ ಹಾಕಿ, ನಿರಾಶಳಾದೆನು. ನನ್ನ ಸುಖ, ದುಃಖ, ಹುಟ್ಟು ಸಾವುಗಳು ನನ್ನ ಕೈಯಲ್ಲಿದ್ದರೆ ನಾನೇಕೆ ನರಕ ಯಾತನೆ ಅನುಭವಿಸುತ್ತಿದ್ದೆ? ಸರಿ, ಸ್ವಾಮಿಯ ಆಜ್ಞೆಯನ್ನು ಉಲ್ಲಂಘಿಸಲು ಯಾರಿಗೆ ಸಾಧ್ಯ? ಸಂಕಲ್ಪವು ಸರ್ಪ ರೇಖೆಯಾಗಿರುವಾಗ ಬಾಳಿಗೆಲ್ಲ ಬೆಳುದಿಂಗಳು ಹೇಗೆ ಬಿದ್ದೀತು? ಹೆಚ್ಚು ವೇಳೆ ಕಳೆಯಲಾರೆ. ನನಗೂ ಶೀರಾಸಂಕಟವಾಗುತ್ತದೆ ನನ್ನನ್ನು ನೀವೆಲ್ಲರೂ ಕಡಿದು ಚಲ್ಲಿಬಿಡಿರಿ. ನಿಮಗೆ ಬಂದೊದಗಿರುವ ದುರ್ಧರ ಪರಿಸ್ಥಿತಿಯಿಂದ ಮುಕ್ತರಾಗಿ ಸುಖಜೀವನವನ್ನು ಕಳೆಯಿರಿ. ಹೂಂ.........ಕುತ್ತಿಗೆಯ ಮೇಲೆ ಕತ್ತಿಯನ್ನಿಡಿರಿ......... " ಎನ್ನುತ್ತ ಆ ಮಹಾತಾಯಿ, ಶಿರಬಾಗಿ ನಿಂತು ಬಿಟ್ಟಳು. ಆಗ ಮೊದಲು ಹಿರಿಯ ಮಗನ ಚೂರಿಯು, ಅವಳ ಹೃದಯವನ್ನು ಹರಿದು ಚಲ್ಲಿತು. ನಂತರ ಕಿರಿಯ ಮಗನು ರುಂಡವನ್ನು ಬೇರ್ಪಡಿಸಿದನು. ಕೊನೆಗೆ ಮಗಳು ದೇಹದ ತುಂಡುಗಳನ್ನು ಚೀಲದಲ್ಲಿ ತುಂಬಿಟ್ಟಳು.

ಆ ಮಹಾತಾಯಿ ಮಕ್ಕಳ ಸುಖ ಸೌಕರ್ಯಕ್ಕಾಗಿ ಆತ್ಮ ಬಲಿದಾನವನ್ನು ಕೊಟ್ಟು ಚಿರಶಾಂತಿಯನ್ನು ಹೊಂದಿದಳು.

ತಾಯಿಯ ಕೊಲೆಗಾಗಿ ಕಣ್ಣೀರಿಡದ ಮಕ್ಕಳುಂಟೆ? ಸಾಂಪ್ರದಾಯದಂತೆ ಶೋಕಿಸಿದ ಆ ಮಕ್ಕಳು, ನಡುರಾತ್ರಿಯ ಸಮಯಕ್ಕೆ ಮನೆಯನ್ನು ಬಿಟ್ಟರು.

ಆ ಹಳ್ಳಿಯ ಮುಂಭಾಗದಲ್ಲಿಯೇ ಮಹಾತಾಯಿ ಗೋದಾವರಿಯು ಪ್ರಶಾಂತ ಚಿತ್ತಸ್ಥಳಾಗಿ, ವಿಶಾಲ ಮನೋವೈಶಾಲ್ಯತೆಯುಳ್ಳವಳಾಗಿ ಹರಿಯುತ್ತಿದ್ದಾಳೆ...... ಆದರೆ ಆದಿನ ಅಲ್ಲಿ, ಸಾಗರದ ಸಹಜ ಸೌಂದರ್ಯ ವಿರಲಿಲ್ಲ. ಎಲ್ಲವೂ ಶೂನ್ಯಮಯವಾಗಿ ಕಂಡಿತು. ಮತ್ತೊಮ್ಮೆ ನೋಟವನ್ನು ಬೀರಿದರು. ಯಾರೂ ಆ ಪಾಪಿಗಳಿಗೆ ಗೋಚರವಾಗಲಿಲ್ಲ. ಆದರೇನೂ,

ಅವರ ಕಣ್ಣಿನಲ್ಲಿ ಅಮಾನುಷ ಕೊಲೆಯ ಕ್ರೂರ ದೃಶ್ಯ ಮಾತ್ರ ತಾಂಡವವಾಡುತ್ತಿತ್ತು ! ಗೋದಾವರಿ ಹಾಗೆಯೇ ಹರಿಯುತ್ತಿದ್ದಳು ದಂಡೆಯ ಮೇಲೆ ಕುಳಿತು ಕೊಂಡ, ಮೂವರು ಮಕ್ಕಳ ಮೇಲಿನ ಮನಸ್ಸಿಗಾಗಿ ದುಃಖ ಉಕ್ಕೇರಿಬಂದಾಗ ಭೋರೆಂದು ಸದ್ದು ಮಾಡುತ್ತಿದ್ದಳು "ಕಳಕಳ" ಎಂಬ ಕರುಳಿನ ಕೂಗನ್ನು ಹಾಡುತ್ತಿದ್ದಳು. ಆಗಲೇ ಬೆಳಗಾಗುವ ಸಮಯವಾಯಿತು. ಮೂವರೂ ಮಕ್ಕಳು ತಾಯಿಯ ಛಿದ್ರೀಕೃತ ಶವದ ಗಂಟನ್ನು ಗೋದಾವರಿಗೆ ಅರ್ಪಿಸಿ,ಹೇಗೋ ಮನೆಸೇರಿದರು.

ಗೋದಾವರಿಯು ಎದೆ ಉಬ್ಬಿಬಂತು. ಆ ತಾಯಿಯ ಉದಾತ್ತ ವಿಚಾರ ಅವಳಲ್ಲಿರುವ ತಾಯ್ತನ, ಮಕ್ಕಳ ಮೇಲಿನ ಮಮತೆ, ಸಮತೆ ಎಲ್ಲವೂ ಗೋದಾವರಿಗೆ ವಿಚಿತ್ರವಾಗಿ ಕಾಣಿಸಿದವು. ಆ ಮಹಾತಾಯಿಯನ್ನು ಒಡಲಲ್ಲಿ ಹಾಕಿಕೊಂಡರೆ ಕ್ರೂರ ಪ್ರಾಣಿಗಳು ಅವಳಿಗೆ ಹಿಂಸಿಸಬಹುದೆಂದು ಭಾವಿಸಿದಳೋ ಏನೋ ತೆರೆಗಳ ತೊಟ್ಟಿಲಲ್ಲಿ ತೂಗುತ್ತ ಕರೆದೊಯ್ದಳು !

ತಾಯಿಯ ಕೊಲೆಯಾದ ಮೇಲೆ ಸಮಾಜದ ವಾತಾವರಣವೇ ವಿಚಿತ್ರವಾಯಿತು. ಆ ತಾಯಿಯ ಬಲಿದಾನಕ್ಕಾಗಿ ಸುರಿಯಬೇಕಾಗಿದ್ದ ಕಣ್ಣೀರುಗಳು ಮೈಭಾರದಿಂದ ಕಣ್ಣಿನಲ್ಲಿಯೇ ಇಂಗಿದವು.

ನಾಸಿಕ ಜಿಲ್ಲೆಯ ಆ ಹಳ್ಳಿಯಲ್ಲಿ ಮಹಾರೋಗಿಯಾಗಿದ್ದ (Leprosy Peasent) ಆ ತಾಯಿಯ ಮುಖವನ್ನು ಯಾರೂ ನೋಡಲು ಹಿಂಜರಿಯುತ್ತಿದ್ದರು. ಅವಳ ಸಾವಿಗಾಗಿ ನಿತ್ಯವೂ ಚಿಂತನೆ ಮಾಡುತ್ತಿದ್ದರು. "ಸಾಂಸರ್ಗಿಕವಾಗಿ ರೋಗ ಹಬ್ಬುವದು. ಅತ್ಯುಗ್ರವಾದ ಈ ರೋಗ ಯಾರಿಗೆ ಅಂಟುವದೋ ಅವರು ನಿಜವಾಗಿಯೂ ಪಾಪಿಗಳು, ಕುಕರ್ಮಿಗಳು. ಅವರ ಮುಖ ನೋಡಿದರೂ ಸಹ ಪಾಪ ಬರುತ್ತದೆ" ಎಂಬ ಭಾವನೆ ಜನಸಾಮಾನ್ಯರಲ್ಲಿ ಬೇರೂರಿದ್ದಿತಾದುದರಿಂದ ಆ ಊರ ಜನರೂ ಆ ತಾಯಿಯನ್ನು ಬಲವಾಗಿ ಟೀಕಿಸುತ್ತಿದ್ದರು. ಅವಳು ಎಂದಾದರೊಮ್ಮೆ ಹೊರಗೆ ಇಣಿಕಿದರೆ ಇಲ್ಲವೆ ಅಕಸ್ಮಾತ್ ಓಣಿಯಲ್ಲಿ ಓಡಾಡಿದರೆ ಜನರು ಮೂಗು ಮುರಿಯುತ್ತ ಅವಳಿಂದ ಓರಿಯಾಗಿ ಹೋಗುತ್ತಿದ್ದರಲ್ಲದೆ ಅವಳ ಮನ ನೋಯುವಂತೆ ಚುಚ್ಚು ಮಾತುಗಳನ್ನಾಡುತ್ತಿದ್ದರು. ಜನರತ್ತ ಅವಳು ದೃಷ್ಟಿ ಬೀರಿದರೆ "ಥೂ" ಎಂದು ಉಗುಳುತ್ತಿದ್ದರು......... ಮುಖವನ್ನು ಮುಚ್ಚಿಕೊಳ್ಳುತ್ತಿದ್ದರು. "ಅಯ್ಯೋ! ಅರಿಷ್ಟ" ಎನ್ನದವರೂ ವಿರಳವೇ ಸರಿ.

ಜನರೆಲ್ಲರೂ ದೂಷಣೆಗೆ ಮೊದಲು ಮಾಡಿದರಲ್ಲದೆ ಅವರ ಮನೆಯ ಸಂಪರ್ಕವನ್ನೇ ಕಡಿದುಕೊಂಡರು. ಆ ಮಹಾರೋಗಿಯ ಮಕ್ಕಳೊಡನೆ ಸಹಕಾರವನ್ನಿಟ್ಟುಕೊಳ್ಳಲಿಲ್ಲ ಅವರಿಗೂ ಹೀನಾಯವಾದ ನುಡಿಗಳನ್ನಾಡುತ್ತಿದ್ದರು. ಅದರಲ್ಲಿ ಕೆಲವರು ತಾಯಿಯ ಕೊಲೆ ಮಾಡಲು ಉದ್ರೇಕಿಸುತ್ತಿದ್ದರು.

ಬರಬರುತ್ತ ಜನರು ಆ ತಾಯಿಯ ಮಕ್ಕಳೊಡನೆ ವ್ಯವಹಾರವನ್ನು ಸಹಿತ ಬಂದುಮಾಡಿದರು. "ತಾಯಿಯ ರೋಗವೂ ಅವರಲ್ಲಿ ಬೆಳೆಯುತ್ತಿದ್ದರೆ ನಾವು ಮಾತನಾಡಿಸುವದೂ ಹಿತವಲ್ಲ." ಎಂದು ಅವರೊಡನೆಯೂ ಜನರು ವಕ್ರವಾದ ವರ್ತನೆಯನ್ನಿಟ್ಟುಕೊಂಡರು.

ಇದನ್ನೆಲ್ಲವನ್ನು ನೋಡಿದ ತಾಯಿ ಅಸಹನೀಯವಾಗಿ ನೊಂದುಕೊಳ್ಳುತ್ತಿದ್ದಳು. ಮನದಲ್ಲಿಯೇ ಕಣ್ಣೀರು ಸುರಿಸುತ್ತಿದ್ದಳು. ದೈವೀ ಪ್ರಭಾ

ಹಕ್ಕಿ ಆಶ್ಚರ್ಯ ಹೆಟ್ಟುಕೊಂಡು “ ಎಲ್ಲವೂ ದೈವಲೀಲೆ ” ಎನ್ನುತ್ತ ಜೀವನ ನಡೆಸಿದಳು. ಮಕ್ಕಳ ಭವಿಷ್ಯತ್ತಿಗಾಗಿ ನಿತ್ಯವೂ ದೇವನಲ್ಲಿ ಮೊರೆಯಿಡುತ್ತಿದ್ದಳು !

ಆ ತಾಯಿಯ ಮನೆಗೆ ಊರಿನವರ ಸಂಬಂಧ ಲವಲೇಶವೂ ಉಳಿಯಲಿಲ್ಲವಾದುದರಿಂದ ಅದರಲ್ಲೂ ಮಹಾರೋಗದಂಥ ಅತ್ಯುಗ್ರ ರೋಗದ ಬಾಧೆಯಿದೆ, ಎಂದ ಮೇಲೆ ವರ್ಣನಾತೀತ ಸ್ಥಿತಿಯಾಯಿತು. ಕೈಕಾಲುಗಳು ಅರ್ಧದ ಮೇಲ್ಪಟ್ಟು ಕೊಳೆತು ಹೋದವು. ಮೂಗು, ಕಿವಿ ಇತ್ಯಾದಿಗಳೂ ಸಹಿತ ಉದುರಲನುವಾಗಿದ್ದವು. ರಕ್ತದ ಚಲಾವಣೆಯೂ ಬಂದಾಗಿ ದೇಹವೆಲ್ಲವೂ ಗಡ್ಡೆಗಟ್ಟಿದ್ದಿತು. ಅಂತೂ ಅಕರಾಳ ಸ್ವರೂಪ; ದುರ್ವಾಸನೆ !

ಆ ಸಮಯ ಮಗಳು ಮದುವೆಗೆ ಪ್ರಾಪ್ತಳಾದಳು; ಇನ್ನುಳಿದ ಎರಡು ಜನ ಗಂಡು ಮಕ್ಕಳೂ ವಯಸ್ಸಿಗೆ ಬಂದರು. ದುಡಿಮೆಯ ದಾರಿಯಾದರೂ ಇಲ್ಲ, ಇದ್ದ ಕೂಲಿಯ ಕೆಲಸವೂ ಬಂದಾಯಿತು. ಯಾರೂ ಸಹಕಾರ ಬೆಳೆಸಲು ಮನಸ್ಸು ಮಾಡಲಿಲ್ಲ.ಅಂದಾಗ ಜೀವಿತವು ಹೇಗೆ ಸಾಗಬೇಕು ?

ದುಡಿಮೆಯ ಭಾರ ಕಡಿಮೆಯಾದರೆ ಹೊಟ್ಟೆಯ ಹೋರಾಟ ನಿಲ್ಲದು !

ಎರಡೂ ಮಕ್ಕಳಿಗೆ ವೇದನೆಯಾಯಿತು. ಇತ್ತ ತಾಯಿಯ ಕೊಳೆರೋಗ—ಅತ್ತ ಸಂಸಾರದ ಭಾರ— ಇನ್ನೊಂದೆಡೆಗೆ ಸಮಾಜದ ಅಸಹಕಾರ, ಅಸಭ್ಯವರ್ತನೆ. ಎಲ್ಲವೂ ಬಿಡಿಸಲಾರದ ಸಮಸ್ಯೆ, ಇಳುಹಲಾರದ ಹೊರೆ !

ಬೆಳೆದ ತಂಗಿ ಮನೆ ಹಿಡಿದು ಕುಳಿತಳೆಂದು ಅಣ್ಣಂದಿರಿಗೆ ಬಲವಾದ ಚಿಂತೆ; ತಾಯಿಗೆ ಕರುಳುಬೇನೆ. ಇದ್ದ ಮನೆಯನ್ನೇ ಮಾರಿ ತಂಗಿಯನ್ನು ಯಾವನಾದರೊಬ್ಬ ದಾರಿಕಾರನಿಗಾದರೂ ಮದುವೆ ಮಾಡಿಕೊಡಬೇಕೆಂದರೆ ಸಮಾಜ ಕಂಟಕ ಪ್ರಾಯವಾಗಿ, ಪರಿಣಮಿಸಿತು. ದೂಷಣೆಗೆ ಮೊದಲು ಮಾಡಿತು !

ಆ ಮೂರು ಮಕ್ಕಳು ಚಿತೆಯ ಚಿತೆಯಲ್ಲಿ ಬೆಂದು ಬೆಂಡಾಗುತ್ತ ನಡೆದರು. ತಾಯಿ ಎಲ್ಲವನ್ನು ನೋಡುತ್ತ ಮಹಾರೋಗದ ಮಾರಿಗೆ ತನ್ನ ಶರೀರದ ಅಂಗಾಂಗಗಳನ್ನು ನಿತ್ಯವೂ ಎಡೆಯಾಗಿ ನೀಡುತ್ತ ನಡೆದಳು. ದುರ್ವಾಸನೆಯ ಕೋಣೆಯಲ್ಲಿಯೇ ದಾರಿ ದೊರೆಯಲೆಂದು ದೇವರನ್ನು ಬೇಡಿಕೊಳ್ಳುತ್ತಿದ್ದಳು. ಮೃತ್ಯು ಮಹಾ ಮಾರಿಗೆ ಕ್ಷಣ ಕ್ಷಣಕ್ಕೂ ಆವ್ಹಾನವಿತ್ತುತ್ತಿದ್ದಳು. ಆದರೆ ಎಲ್ಲದಕ್ಕೂ ದೈವಾನುಕೂಲಬೇಕಲ್ಲವೇ ?

ಆ ದಿನ ಆ ವ್ಯಕ್ತಿ ಮೂವರು ಮಕ್ಕಳ ಮಧ್ಯದಲ್ಲಿ ಕುಳಿತು ಹೇಳಿತು. “ ನೀವು ಸುಖಿಗಳಾಗಿ ಜೀವಿಸಬೇಕಾದರೆ, ಸಮಾಜದ ಸಹಾಯ—ಸಹಕಾರಗಳು ದೊರೆಯಬೇಕಾದರೆ, ನಿಮ್ಮೆಲ್ಲರ ದೈವದ ಬಾಗಿಲು ತೆರೆಯಬೇಕಾದರೆ ನೀವು ನಿಮ್ಮ ತಾಯಿಯ ಕೊಲೆ ಮಾಡಿರಿ. ಮಹಾರೋಗಸ್ಥಳಾದವಳನ್ನು ಮನೆಯಲ್ಲಿಟ್ಟುಕೊಂಡು ಕುಳಿತರೆ ನಿಮಗೆ ಹೆಣ್ಣು ಕೊಡಲು ಯಾರೂ ಒಪ್ಪುವುದಿಲ್ಲ ನಿಮ್ಮ ತಂಗಿಗೆ ಉತ್ತಮ ವರ ಸಿಕ್ಕುವದು, ಕಷ್ಟಸಾಧ್ಯ. ನಿಮ್ಮೆಲ್ಲರ ಲಗ್ನವಾಗಿ ನಾಲ್ಕು ಜನರೊಂದಿಗೆ ಬೆರತು, ನೆಮ್ಮದಿಯಾಗಿ ಬಾಳಬೇಕಾದರೆ ನಿಮ್ಮ ತಾಯಿಯ ಕೊಲೆ ಮಾಡಿರಿ. ನಂತರ ನಿಮ್ಮ ಬೇಡಿಕೆಗಳನ್ನು ಸಮಾಜವು ತಾನಾಗಿಯೇ ಪೂರೈಸುವದು ” ಇಷ್ಟು ಆ ವ್ಯಕ್ತಿ ಹೇಳಿದ ಉಪದೇಶ.

“ ನಿಜ ನಾವು ಸುಖಿಗಳಾಗಬೇಕಾದರೆ, ನಮ್ಮೆಲ್ಲರ ಲಗ್ನಗಳು ಆಗಿ, ಬಾಳುವೆಯ ಬೃಂದಾವನವನ್ನು ಕಾಣಬೇಕಾದರೆ ನಾವು ತಾಯಿಯ ಕೊಲೆ ಮಾಡಬೇಕು......................” ಇದು ಮೂವರೂ ಮಕ್ಕಳ ನಿರ್ಧಾರ.

ಎಲ್ಲವೂ ಅವರ ತಲೆಯಲ್ಲಿ ತೆರೆತೆರೆಯಾಗಿ ಸುಳಿದಾಡತೊಡಗಿತು. ಸ್ಮೃತಿಯ ಸರೋವರದಲ್ಲಿ ಆ ಮೂರೂ ಮಕ್ಕಳೂ ತೇಲುತ್ತಿದ್ದರು. ಅಂತೆಯೇ ಆ ಮಹಾ ತಾಯಿಯನ್ನು ಗೋದಾವರಿಯ, ತೆರೆಗಳ ತೊಟ್ಟಿಲಲ್ಲಿ ತೂಗುತ್ತ ರುದ್ರ ಗೀತೆಯನ್ನು ಹಾಡುತ್ತಿದ್ದಳು. ಆ ಮಹಾ ತಾಯಿಗಾಗಿ ಒಡಲ ದುಡಿಲಿನಿಂದ ಉದ್ಭೂತವಾಗುತ್ತಿದ್ದ ಶೋಕವನ್ನು ಸಹಿಸಿ ಸಹಿಸಿ,

ಒಮ್ಮೊಮ್ಮೆ ಉದ್ರೇಕಗೊಳ್ಳುತ್ತಿದ್ದಳು. ಅಂತೂ ಆ ತಾಯಿಯ ಶರೀರದ ಛಿದ್ರೀಕೃತ ಗಂಟು, ಹಾಗೆಯೇ ಸಾಗಿದ್ದಿತು. ಪಕ್ಷಿಗಳು ಮನೆಗೆ ಬಂದು ಯೋಚನಾ ಸಮಾಧಿಯನ್ನು ಸೇರಿದ್ದರು. ಹೊರಗಿನ ಜಗತ್ತು ಅನ್ಯಾಯದ ಪ್ರತಿಭಟನೆಗಾಗಿ, ಸಮಾಜದಲ್ಲಿ ನಡೆಯುವ ಘೋರ ಕೃತ್ಯಕ್ಕಾಗಿ, ಮಾತು ಬಾರದೆ ಮೌನವನ್ನು ತಾಳಿದ್ದಿತು. ಕಣ್ಣಾರೆ ಕಂಡ ಸೃಷ್ಟಿದೇವಿ ಭೋರಿಡುತ್ತಿದ್ದಳು. ತಾಯ್ತನದ ಕೊಲೆಗಾಗಿ ಬಾನ್ದೇವಿ ಬಲವಾಗಿಯೇ ಕಣ್ಣೀರುದುರಿಸುತ್ತಿದ್ದಳು. ನೆಲದ ಮೇಲೆ ಕರ್ಪುರದ ಕೆಸರು ನಿರ್ಮಿತವಾಗಿದ್ದಿತು.

## (೨)

ಊರಲ್ಲಿಯೂ ಕೊಲೆಯ ವಾರ್ತೆ ದಟ್ಟವಾಗಿಯೇ ಹಬ್ಬಿಕೊಂಡಿದ್ದಿತಾದ್ದರಿಂದ ಯಾರೋ ಪೋಲೀಸರಿಗೆ ತಿಳಿಸಿದರು! ಎಂತೋ ಮನೆಯ ಮುತ್ತಿಗೆಯಾಗಿ, ಅಪರಾಧಿಗಳು ದೊರೆತರು.

ಊರಲ್ಲೆಲ್ಲ ಗುಜುಗುಜು ನಡೆದೇ ಇದ್ದಿತು. “ತಾಯಿಯ ಕೊಲೆ ಮಾಡಿದರು. ಅಂದಮೇಲೆ ಇವರೇನನ್ನಾದರೂ ಮಾಡಬಲ್ಲರು. ಇವರು ಮನುಷ್ಯರಲ್ಲ. ರಾಕ್ಷಸರು, ಕೊಲೆಗಡಕರು, ಹೇಸಿಗಳು, ನಿರ್ದಯಿಗಳು.”

ಸಮಾಜವೆಲ್ಲವೂ ಇವರನ್ನು ದೂಷಿಸಿತು. ಯಾವುದನ್ನು ಸಮಾಜವು ಒಪ್ಪಿಕೊಂಡಿದ್ದಿತೋ ಅದನ್ನೇ ಈಗ ಬಲವಾಗಿ ವಿರೋಧಿಸುತ್ತದೆ. ಸಮಾಜದ “ಕಡುಕತನ”ವನ್ನು ನೋಡಿ ಮೂವರೂ ನೊಂದರು. ತಿರವು ಮರುವು ಸಮಾಜ, ಅನ್ಯಾಯ, ಅನೀತಿ ಪ್ರಧಾನ ಸಮಾಜ, ಹೇಸಿ, ರೋಷದ ಸಮಾಜ ಎಂದು ಅವರು ಸಮಾಜಕ್ಕೆ ಹೆಸರಿಸಿದರು. ಮನಸ್ಸಿನಲ್ಲಿ ಛೀ! ಥೂ ಹಾಕಿದರು.

ಕಾಲಾನುಕೂಲವಾಗಿ ಸಾಗುವ ಸಮಾಜವು ನ್ಯಾಯ ಅನ್ಯಾಯಗಳ ವಿಚಾರ ಮಾಡಲಾರದು. ಇಂದು ಸತ್ಯವಾಗಿ ಕಂಡದ್ದು, ನಾಳೆ ಅಸತ್ಯ

ವಾಗಿ ಕಾಣಬಹುದು. ಹೀಗೆ ನಿಶ್ಚಿತ ಗೊತ್ತು ಗುರಿಗಳಿಲ್ಲದೆಯೇ ಸಾಗುವ ಸಮಾಜಕ್ಕೆ ಧಿಕ್ಕಾರ ! ಎಂದು ಮೂವರು ಮಕ್ಕಳು ಉಸಿರೆಳೆದರು.

ಅಂತೂ ಮೂವರು ಕಚೇರಿಯ ಕಟ್ಟೆಯನ್ನು ಹತ್ತಿದರು. ಅಪರಾಧಿಯ ಹೃದಯವನ್ನು ಗಳಿಸಿಕೊಂಡರು. ಪಶ್ಚಾತ್ತಾಪದ ಕಿರಗಣಿಯ ಮಡವಿನಲ್ಲಿ ಸಿಕ್ಕಿ ಒದ್ದೆಯಾದರು. ಅವರನ್ನು ಪೋಲೀಸರ ಕಚೇರಿಗೆ ಕೊಂಡೊಯ್ಯುವಾಗ ಸಮಾಜವು ತೋರಿಸಿದ ಅನಾದರ, ವ್ಯಕ್ತಪಡಿಸಿದ ಅಸಂತೋಷಗಳನ್ನು ನೆನೆನೆನೆದ, ಮೂವರೂ ಮಿಡುಗುತ್ತಿದ್ದರು. ಮುಂದೆ ನಡೆಯಬಹುದಾಗಿದ್ದ ವಿಚಾರಣೆಯ ವಿಷಯವಾಗಿ ಯೋಚನೆಗೈಯುತ್ತಿದ್ದರು. ಕೊನೆಯದಾಗಿ “ಆದದ್ದನ್ನು ಅನುಭವಿಸಲೇಬೇಕು.” ಎಂದುಕೊಂಡು ಸ್ತಂಭಿತರಾದರು.

ನ್ಯಾಯಾಧೀಶರು ವೇದಿಕೆಯನ್ನು ಅಲಂಕರಿಸಿ, ಅಪರಾಧಿಗಳನ್ನು ಹೀನಾಯ ದೃಷ್ಟಿಯಿಂದ ನೋಡಿದರು. “ತಾಯಿಯ ಕೊಲೆ ಮಾಡಿದ ಮಕ್ಕಳಿವರು..................” ಎನ್ನುತ್ತ ಟೇಬಲ್ ಮೇಲಿನ ಹಾಳೆಗಳನ್ನು ಹೊಂದಿಸುತ್ತ ಹಿರಿಯ ಮಗನನ್ನು ಪ್ರಶ್ನಿಸಿದರು.

“ಸತ್ಯವಾಗಿ ಹೇಳುತ್ತೀಯಾ ?”

“ಸತ್ಯವಾಗಿಯೇ ಹೇಳುತ್ತೇನೆ.”

“ತಾಯಿಯ ಕೊಲೆ ಮಾಡಲು ಕಾರಣವೇನು ?”

“ಅದಕ್ಕೆ ಸಮಾಜವೇ ಕಾರಣ !”

ನ್ಯಾಯಾಧೀಶರು ಅವಕ್ಕಾದರು. ಅಪರಾಧಿತಹೃದಯದ ಮಾತಿನ ಬಾಣಗಳು ನ್ಯಾಯಮೂರ್ತಿಯನ್ನು ಭೇದಿಸದೆಯೇ ಬಿಡಲಿಲ್ಲ.

“ಇರಲಿ ನಿಚ್ಚಳವಾಗಿ ಹೇಳು”

"ತಂದೇ, ನನ್ನ ತಾಯಿ ಮಹಾರೋಗಿ ಇದ್ದಳು. ಅವರು ಅತ್ಯಂತ ದಾರುಣ ಪರಿಸ್ಥಿತಿಗೀಡಾದಳು. ದೇಹವೆಲ್ಲ ಕೊಳೆಯಲನುವಾಯಿತು. ಆಗ ನನ್ನ ತಂಗಿ ಮದುವೆಗೆ ಪ್ರಾಪ್ತಳಾದಳ . ನಾವೂ ಬೆಳೆದು ದೊಡ್ಡವರಾದೆವು. ಮುಂದೆ ಸಮಾಜವು ನನ್ನ ತಾಯಿಯನ್ನು ಬಲವಾಗಿ ವಿರೋಧಿಸುತ್ತಿದ್ದಿತು. "ಮಹಾರೋಗಿಯು ಪಾಪಿ, ಅದರ ಮುಖ ನೋಡಬಾರದು" ಎಂದು ದೂಷಿಸುತ್ತ, ನಮ್ಮೊಡನೆಯೂ ಸರ್ವ ಸಂಪರ್ಕವನ್ನು ಕಡಿದುಕೊಂಡಿತು. ಆಗ ನಾವು ಹುಟ್ಟು ಬಡವರಾದುದರಿಂದ ಊರಲ್ಲಿ ಕೂಲಿ ದೊರೆಯುಲ್ಲಿಲ್ಲ. ಯಾರೂ ಸಹಕಾರ ನೀಡಲು ಸಿದ್ಧರಾಗಲಿಲ್ಲ. ಎಲ್ಲದರಲ್ಲೂ ವಿರೋಧಕ್ಕೆ ವೊದಲು ಮಾಡಿದರು ಹೀಗಾಗದರೆ ಜೀವಿಸುವುದಾದರೂ ಹೇಗೆ? ಹೀಗಾಗಿ, ನಾವೆಲ್ಲ ದುರಂತಕ್ಕೊಳಗಾದೆವು......"

"ಇರಲಿ ತಾಯಿಯ ಕೊಲೆ ಮಾಡಿದ್ದೇಕೆ?" ನ್ಯಾಯಾಧೀಶರು ಕೇಳಿದರು.

"ಹೊಟ್ಟೆಗೆ ಹಿಟ್ಟಿಲ್ಲವಿದ್ದಾಗ ಮಾಡುವದಾದರೂ ಏನು? ಸಮಾಜದ ಬಂಧನಕ್ಕೆ ಒಳಗಾಗದೆಯೇ ಉದರ ನಿರ್ವಾಹವಾಗುವಂತಿಲ್ಲ..."

"ಮುಂದೆ .......?"

"ಏನೂ ಇಲ್ಲ. ಸಮಾಜದ ಸಲಹೆಯನ್ನು ಪಾಲಿಸಬೇಕಾಯಿತು. ಆಗ ಒಬ್ಬ ವ್ಯಕ್ತಿಯು ಮುಂದೆ ಬಂದು......"

"ಹೂಂ. ನಿಲ್ಲಲಾಗದು. ಸವಿಸ್ತಾರವಾಗಿ ಹೇಳು......"

ಆ ದಿನ ನನ್ನ ತಾಯಿಯ ಕೊನೆಯ ದಿನ. ಆ ವ್ಯಕ್ತಿ ನಮ್ಮ ಮನೆಗೆ ಬಂದು ಹೇಳಿದರು. ನೀವು ನಿಮ್ಮ ತಾಯಿಯಕೊಲೆ ಮಾಡಿದರೆ ನಿಮಗೆ ಬಾಳಿನ ದಾರಿ; ಇಲ್ಲವಾದರೆ ಇಲ್ಲ. ಮಹಾರೋಗದ ತಾಯಿಯನ್ನು ಮನೆಯಲ್ಲಿಟ್ಟುಕೊಂಡರೆ ನಿಮ್ಮಗಳ ಲಗ್ನವಾಗಲಾರದು. ಯಾರೂ ನಿಮ್ಮೊಡನೆ ಸಹಕಾರ ಬೆಳಿಸರು. ಸಂಬಂಧ ಮಾಡಿಕೊಳ್ಳರು. ಕೂಲಿಗೆ ಕರೆಯ

ಲಾರರು. ತಾಯಿಯ ಮೇಲಿನ ಮೋಹಕ್ಕಾಗಿ ನಿಮ್ಮೆಲ್ಲರ ಜೀವನವನ್ನು ಹಾಳು ಮಾಡಿಕೊಳ್ಳಬೇಡಿರಿ. ನೀವುಗಳು ಒಮ್ಮತದಿಂದ ನಿಮ್ಮ ತಾಯಿಯ ಕೊಲೆಮಾಡಿರಿ. ಅಂದರೆ...... ಮುಂದಿನ ದಾರಿ ...... "

" ಇರಲಿ.............. ಆ ವ್ಯಕ್ತಿಗೂ ನಿಮಗೂ ಸಂಬಂಧವೇನಾದರೂ ಇದ್ದಿತೆ ? "

" ಏನೂ ಇಲ್ಲ. "

" ಆ ವ್ಯಕ್ತಿ ಅಂದರೆ ಕೊಲೆ ಮಾಡಲು ಉತ್ತೇಜನ ಕೊಟ್ಟ ಆ ಮನುಷ್ಯನ ಹೆಸರೇನು ? " ನ್ಯಾಯಾಧೀಶರು ಗಂಭೀರವಾಗಿ ಕೇಳಿದರು.

" ಶಂಕರ ನಾರಾಯಣ "

" ಅವರ ಪೂರ್ಣ ಪತ್ತೆ ನಿನಗೆ ಗೊತ್ತಿದೆಯೇ "

" ಗೊತ್ತಿದೆ ಸಾಹೇಬರೆ,......... "

" ಅಂಜುವಿಏಕೆ ಹೇಳು....... "

" ಇಲ್ಲ. ನಾವು ಕೊಲೆ ಮಾಡಿದವರು. " ಬಲವಾಗಿ ಅರಚಿದನು.

" ಹೂಂ ಹೇಳು " ಕೊನೆಗೆ ಹಿರಿಯ ಮಗನು ಹೇಳಿದನು.

ನ್ಯಾಯಾಧೀಶರು ಕೊಲೆಗೆ ಕಾರಣರಾದ ಶಂಕರ ನಾರಾಯಣರನ್ನು ಕರೆಯಿಸಿದರು.

ಮರುದಿವಸ ತೀರ್ಪು ಕೊಡುವದಿತ್ತು. ಆ ಹಳ್ಳಿಯ ಜನರೆಲ್ಲ ಕೋರ್ಟಿನ ಸುತ್ತು ಮುತ್ತಲೂ ನೆರೆದಿದ್ದರು. ಕೆಲವರು ಅಪರಾಧಿಗಳಾಗಿ ಬಂದಿದ್ದ ಮೂವರೂ ಮಕ್ಕಳನ್ನು ಕಾಣಲು ಆಶಾತುರತೆಯಿಂದ ನ್ಯಾಯಮೂರ್ತಿಗಳ ಖೋಲಿಯ ಬಾಗಿಲವನ್ನೇ ನೋಡುತ್ತಿದ್ದರು.

ಅಂತೂ ತೀರ್ಪು ಹೊರಬಿದ್ದಿತು. ಆ ತೀರ್ಪು ಜನರನ್ನು ಉದ್ರೇಕಗೊಳಿಸಿತು. ಇಡೀ ಊರಿಗೆ ಊರೇ ಆ ಮಹಾ ತಾಯಿಯ ಕೊಲೆಯಿಂದ ಪಾಠ ಕಲಿಯುವಂತಾಯಿತು. "ಅಪರಾಧಿ ಯಾರು ?" ಎಂಬುದನ್ನು ಕಂಡು ಅತ್ಯಾಶ್ಚರ್ಯ ಪಡುವಂತಾಯಿತು.

ಆ ಮಹಾತಾಯಿಯ ಕೊಲೆಯ ಆರೋಪಿಗಳು ಬಂಧಮುಕ್ತರಾದರು. ನಿರಪರಾಧಿಗಳೆಂದು ಸಾರಲ್ಪಟ್ಟರು ! ಆದರೆ "ಅದು ಹೇಗೆ? " ಎನ್ನದವರು ಯಾರೂ ಉಳಿಯಲಿಲ್ಲ !

ತಾಯಿಯ ಕೊಲೆಯು ಮಕ್ಕಳಿಂದಾಗಿದ್ದರೂ ಕೊಲೆಯ ಹಿನ್ನೆಲಿಯಾಗಿ ಶಂಕರ ನಾರಾಯಣರಿದ್ದರು. ಮಕ್ಕಳು ತಾಯಿಯ ಕೊಲೆಮಾಡಲುದ್ಯುಕ್ತರಾದದ್ದು ಶಂಕರ ನಾರಾಯಣರಿಂದ. ಇಲ್ಲದ ಕಲ್ಪನೆಯನ್ನು ಕೊಟ್ಟು ಮಕ್ಕಳನ್ನು ತಾಯಿಯ ಕೊಲೆ ಮಾಡಲು ತೊಡಗಿಸಿದ ನಾರಾಯಣರೇ ನಿಜವಾದ ಅಪರಾಧಿಗಳೆಂದು ನ್ಯಾಯಾಧೀಶರು ತೀರ್ಪುಕೊಟ್ಟರು. ಆ ಅಪರಾಧಕ್ಕಾಗಿ ಶಂಕರ ನಾರಾಯಣರಿಗೆ ಗಲ್ಲಿನ ಶಿಕ್ಷೆಯಾಯಿತು.

ಮೂವರೂ ಮಕ್ಕಳು ಗೋದಾವರಿಯ ದಂಡೆಯ ಮೇಲೆ ಕುಳಿತುಕೊಂಡು ಕಣ್ಣೀರು ಸುರಿಸುತ್ತಿದ್ದರು. ಕಣ್ಮರೆಯಾಗಿ ಹೋದ ತಾಯಿಯನ್ನು ಅದೆಷ್ಟೋ ಬಾರಿ ನೆನೆಯುತ್ತ, ಅವಳಿಗಾಗಿ ಅವಳಲ್ಲಿಯ ತಾಯ್ತನಕ್ಕಾಗಿ ಮನಸೋಲುವಂತೆ ಕಣ್ಣೀರ್ಮಿಡಿದು ಸಾವಿರಾರುಸಲ ಮನದಲ್ಲಿಯೇ ನಮಸ್ಕರಿಸುತ್ತಿದ್ದರು. ತಾಯಿಯ ಕೊಲೆ ಮಾಡಿದ ದಾನವೀ ಕೃತ್ಯಕ್ಕಾಗಿ ಪಶ್ಚಾತಾಪ ಪಡುತ್ತಾ "ನಾವು ನಿಜವಾಗಿಯೂ ಪಾಪಿಗಳು" ಎಂದುಕೊಳ್ಳುತ್ತಿದ್ದರು.

ಶಂಕರ ನಾರಾಯಣರ ಮರಣದ ನಂತರ ಜನರು ವಿಪರೀತ ಮಾರ್ಪಾಡಾದರು.

ಸಮಾಜವು ಕೊಲೆಯ ಪೂರ್ವದಲ್ಲಿ ಅವರಿಗಿತ್ತ ಆಶ್ವಾಸನವನ್ನು ಪೂರ್ತಿಯಾಗಿ ಮರೆತುಬಿಟ್ಟಿತು. ಅತ್ಯಂತ ಕ್ರೂರ ದಬ್ಬಾಳಿಕೆ ಮನಸ್ಸು ಹಾಕಿತು.

"ನಿರಪರಾಧಿಯಾರು ? ಅಪರಾಧಿಯಾರು ? ಈ ಮೂವರೂ ಮಕ್ಕಳಿಂದಲಲ್ಲವೇ ಇಷ್ಟೆಲ್ಲ ಅನಾಹುತ? ಶಂಕರನಾರಾಯಣರಿಗೆ ಗಲ್ಲಿನ ಶಿಕ್ಷೆ! ಅಯ್ಯೋ! ಅನ್ಯಾಯ!!" ಎಂದು ಜನರಾಡತೊಡಗಿದ್ದರು.

"ಅಯ್ಯೋ ಕೊಲೆ ಮಾಡಿದರು. ಮಕ್ಕಳು ತಾಯಿಯ ಕೊಲೆಮಾಡಿದರು. ಇವರು ಕ್ರೂರ ಪಾಪಾತ್ಮಿಗಳು" ಎಂದು ಸಮಾಜವು ಇವರಿಗೆ ಬೆರಳು ಮಾಡಿ ತೋರಿಸುತ್ತಿದ್ದಿತು.

ಅತ್ತ ಗೋದಾವರಿಯ ತಡಿಯಮೇಲೆ ಕುಳಿತ ಮೂವರೂ ಮಕ್ಕಳು,

"ಅಯ್ಯೋ! ಕೆರೆಗುಡುಕ ಸಮಾಜವೇ, ನಿನ್ನ ರಾಕ್ಷಸೀ ದಬ್ಬಾಳಿಕೆಯಲ್ಲಿ ನಮ್ಮಂಥ ಅದೆಷ್ಟು ಬಡ ಕುಟುಂಬಗಳು ನುಚ್ಚು ನೂರಾಗುತ್ತಿವೆಯೋ! ನಾವು ಕೊಲೆಮಾಡಿದ್ದು ನಿಜ. ನಮ್ಮ ತಾಯಿಯನ್ನು ಕೊಲೆಮಾಡಿದ್ದು ನಿಜ. ಆದರೆ ಅದಕ್ಕೆ ನೀವೇ ಕಾರಣ ನಿಮ್ಮ ಅವಿವೇಕತನದ,ಹಾಗೂ ತೂಕ ತಪ್ಪಿದ ವಿಚಾರವೇ ಕಾರಣ. ನಾವು ಕೊಲೆಮಾಡಿದ್ದು ನಿಜ. ಆದರೆ ಅಪರಾಧಿಗಳಲ್ಲ." ಎಂಬ ವಿಚಾರಗಳ ಬಿರುಗಾಳಿಗೆ ಅಲುಗಾಡುತ್ತಿದ್ದರು.

ಕೊನೆಯದಾಗಿ ಮಕ್ಕಳು ಒಂದು ನಿರ್ಧಾರಕ್ಕೆ ಬಂದರು "ತಾಯೀ, ನಮ್ಮನ್ನು ಕ್ಷಮಿಸು." ಎನ್ನುತ್ತ ಮೂವರೂ ಗೋದಾವರಿಯ ಒಡಲ ಮಡಿಲಿಗೆ ಧುಮುಕಿದರು.

"ಕ್ಷಮಿಸುತಾಯೀ" ಎಂದು ತಾಯಿಯನ್ನೇ ಹಿಂಬಾಲಿಸಿದರು. ಗೋದಾವರಿಗೂ ದುಃಖ ಉಕ್ಕೇರಿ ಬಂತು, ಮೂವರೂ ಮಕ್ಕಳನ್ನು ಒಡಲಿನಲ್ಲಿ ಬಚ್ಚಿಟ್ಟುಕೊಂಡಳು. ಆದರೂ ಅವಳಂತರಂಗದ ನಿರ್ಮಲ ಭಾವನೆಗಳು ಪೆರ್ದೆರೆಗಳ ರೂಪವನ್ನು ತಾಳಿ, ದಂಡೆಗಪ್ಪಳಿಸುತ್ತಿದ್ದವು.

ಬಾನದೇವಿ ಇದೆಲ್ಲವನ್ನು ಕಿವಿಗೊಟ್ಟು ಕೇಳಿದಳು. ಕಣ್ಣು ತೆರೆದು ನೋಡಿದಳು. ಹೃದಯಾಂತರಾಳದಿಂದ ಅವರನ್ನು ಆಳಿದು ನೋಡಿದಳು. ಕೊನೆಗೆ ", ಅಯ್ಯೋ ! ಇವರು ನಿರಪರಾಧಿಗಳು " ಎನ್ನುತ್ತ ಅವ್ಯಾಹತ ವಾಗಿ ಕಣ್ಣೀರು ಸುರಿಸತೊಡಗಿದಳು.

ಜನರೆಲ್ಲರೂ ಅವರನ್ನೇ ನೋಡುತ್ತ ದೂರದಲ್ಲಿ ನಿಂತಿದ್ದರು. 'ಏನಾಗುವದೋ ' ಎಂದು ನಿರೀಕ್ಷಿಸುತ್ತಿದ್ದರು ಆದರೆ ' ಧಡಂ ' ಎಂಬ ಶಬ್ದವನ್ನು ಕೇಳಿ, ಎಲ್ಲರೂ ಗೋದಾವರಿಯ ದಂಡೆಯ ಮೇಲೆ ನಿಂತುಕೊಂಡರು...

ಆಗಲೂ ಗೋದಾವರಿಯ ಕರುಳಿರಿಯುವ ಕರುಣಾಕರ ರೋಧನ " ಕಲಕಲ " ಎನ್ನುತ್ತಲೇ ಇತ್ತು.

ಬಾನದೇವಿಯು ಸುರಿಸುತ್ತಿದ್ದ ಕಣ್ಣೀರುಗಳು ಧಾರೆ ಧಾರೆಯಾಗಿ ಭೂಮಿಗಿಳಿಯುತ್ತಲೇ ಇದ್ದವು.

ನೆಲದ ಮೇಲೆ ಕರ್ಮದ ಕೆಸರು ನಿರ್ಮಿತವಾಗಿತ್ತು. ಆ ಕೆಸರಿನಲ್ಲಿ ನಿಂತಿದ್ದ ಊರ ಜನರು ಆಲಿಸಿ ಕೇಳುತ್ತಿದ್ದರು; ಗೋದಾವರಿಯ ಒಡಲ ಮಡಿಲಿನಿಂದ ಆಗಲೂ ಈ ಮಾತು ಕೇಳಬರುತ್ತಿತ್ತು.

"ನಾವು ಅಪರಾಧಿಗಳಲ್ಲ ! ಕ್ಷಮಿಸು ತಾಯೀ........."

"ನಾವು ಅಪರಾಧಿಗಳಲ್ಲ!

"ನಾವು ಅಪರಾಧಿಗಳಲ್ಲ......"



卐



ಶ್ರೀ ಮಹದೇವ ಬಣಕಾರ.

ಇದೇ ಲೇಖಕರ ಇನ್ನಿತರ ಕೃತಿಗಳು.

(ಅಚ್ಚಾಗಿವೆ.)

ಕಾವ್ಯೋದಯ (ಕವನ ಸಂಕಲನ)

ಬಣ್ಣದಕಾರಂಜಿ (ಪ್ರೇಮಗೀತೆಗಳು)

ಲೋಕದ ಕಣ್ಣು (ಕಥಾ ಸಂಕಲನ)

(ಅಚ್ಚಾಗಲಿವೆ.)

ಅಲುಗಿದ ಅತ್ಮ (ಸಾಮಾಜಿಕ ಕಾದಂಬರಿ)

ಸೀತಾ ಪರಿತ್ಯಾಗ (ಗೀತನಾಟಕ)

ಂದೆಡೀಡಿ (ಮೂರಂಕಿನ ನಾಟಕ)

ಬೆಳುದಿಂಗಳು (ಇಂಗ್ಲೀಷಗೀತಾನುವಾದ)

ಕಾಲ ಭೈರವಿ (ರುದ್ರಗೀತೆಗಳು)

—ಶೀಘ್ರದಲ್ಲಿಬರಲಿದೆ—

# ನರಕದಲ್ಲಿ ನಾಕ!

(ಸಾಮಾಜಿಕ ಕಾದಂಬರಿ)